# ಪ್ರಸನ್ನವೆಂಕಟದಾಸರ ಹಾಡುಗಳು



ದಾಸಸಾಹಿತ್ಯ ಮಾಲಿಕೆ : ೫

# ಪ್ರಸನ್ನವೆಂಕಟದಾಸರ ಹಾಡುಗಳು

[ ಕವಿ ಪರಿಚಯ, ಅರ್ಥಕೋಶ, ಟಿಪ್ಪಣಿ ಸಹಿತ ]

ಸಂಪಾದಕ :

ಕಾವ್ಯಪ್ರೇಮಿ

ಸಹಸಂಪಾದಕರು :

ಆರ್. ಎಸ್. ಸುಂಕದ, ಎಂ. ಎ.

ವ್ಹಿ. ಆರ್. ಬೇಗೂರ



ಸಮಾಜ ಪುಸ್ತಕಾಲಯ, ಧಾರವಾಡ

ಪ್ರಕಾಶಕರು :
ಸಮಾಜ ಪುಸ್ತಕಾಲಯ
ಧಾರವಾಡ

*


ಪ್ರಥಮ ಮುದ್ರಣ : ೧೯೭೬

*

ಬೆಲೆ : ರೂ. ೪-೫೦

ಮುದ್ರಕರು :
ಪ್ರತಿಭಾ ಮುದ್ರಣ,
ಧಾರವಾಡ

## ದಾಸಸಾಹಿತ್ಯ ಮಾಲಿಕೆ:

ಕನ್ನಡದ ವೇದೋಪನಿಷತ್ತುಗಳಂತಿರುವ ದಾಸಸಾಹಿತ್ಯ ಒಂದು ಅಮೌಲ್ಯ ನಿಧಿ. ನಶಿಸಿಹೋಗುತ್ತಿರುವ ಈ ನಿಧಿಯನ್ನು ಅನೇಕ ಮಹನೀಯರು, ಸಂಘ-ಸಂಸ್ಥೆಗಳವರು ಉಳಿಸಿಕೊಂಡು ಬಂದಿದ್ದಾರೆ.

ಈಗ ಮತ್ತೆ ಅನೇಕ ದಾಸರ ಕೃತಿಗಳು ಅಲಭ್ಯವಾಗಿವೆ. ಇದನ್ನು ಅನುಲಕ್ಷಿಸಿ, ಮಹತ್ತ್ವದ ಎಲ್ಲ ದಾಸರ ಕೃತಿಗಳನ್ನು ಸಮರ್ಪಕವಾಗಿ ಸಂಪಾದಿಸಿ, ದಾಸಸಾಹಿತ್ಯದ ಪ್ರೇಮಿಗಳಿಗೂ, ಅಭ್ಯಾಸಿಗಳಿಗೂ ನೀಡುವ ಉದ್ದೇಶದಿಂದ ಈ ಮಾಲಿಕೆಯನ್ನು ಆರಂಭಿಸಿದ್ದೇವೆ. ಹಾಡುಗಳಿಗೆ ಪರಂಪರಾಗತ ರಾಗ-ತಾಳಗಳೊಡನೆ,ಉತ್ತರಾದಿ ರಾಗಗಳನ್ನೂ ಜೋಡಿಸಿರುವುದರಿಂದ ಉಪಯುಕ್ತತೆ ಹೆಚ್ಚಿದೆ. ಇದರ ಸದುಪಯೋಗವು ಸಹೃದಯರಿಗಾಗಲೆಂದು ಹಾರಯಿಸುತ್ತೇವೆ.

—ಸಂಪಾದಕ

# ಪರಿವಿಡಿ

ಟಪು

# ಅಕಾರಾದಿ

ವಂಜನಭನ
ಮತ್ರೆವನಲ್ಲೂಹ್ಯೋ



## ದಾಸಸಾಹಿತ್ಯ ಮಾಲಿಕೆಯ ಗ್ರಂಥಗಳು



ಕನಕದಾಸರ ಹಾಡುಗಳು
ಪುರಂದರದಾಸರ ಹಾಡುಗಳು
ಜಗನ್ನಾಥದಾಸರ ಹಾಡುಗಳು
ಗೋಪಾಲದಾಸರ ಹಾಡುಗಳು
ಪ್ರಸನ್ನವೆಂಕಟದಾಸರ ಹಾಡುಗಳು

ಅಚ್ಚಿನಲ್ಲಿ

ವಿಜಯದಾಸರ ಹಾಡುಗಳು
ವಾದಿರಾಜರ ಹಾಡುಗಳು
ಶ್ರೀಪಾದರಾಯರ ಹಾಡುಗಳು
ವ್ಯಾಸರಾಯರ ಹಾಡುಗಳು

# ದಾಸ ಸಾಹಿತ್ಯಾವಲೋಕನ

( ಪರಂಪರೆಯ ಪಕ್ಷಿನೋಟ )

---

"ಸಮಾಜ ಸುಧಾರಣಾ ಅಂಗಗಳಲ್ಲಿ ಸಾಹಿತ್ಯದ ಪಾತ್ರವೂ ಪ್ರಮುಖವಾದದ್ದು." ಸಾಹಿತ್ಯವು ಸಮಾಜದ ಕನ್ನಡಿ ಎಂದೂ ಹೇಳುತ್ತಾರೆ. ಆದುದರಿಂದಲೇ, ಸಾಹಿತ್ಯದ ಮುಖಾಂತರ ಸಮಾಜ ಸುಧಾರಣೆಯಾಗಬೇಕು ಎಂಬ ಸೊಲ್ಲು ಇಂದು ಎಲ್ಲೆಡೆಗೂ ಕೇಳಿಬರುತ್ತದೆ. ವ್ಯಕ್ತಿಯ ನೋವು-ನಲಿವುಗಳ ಚಿತ್ರ, ಈ ಸಾಹಿತ್ಯದಲ್ಲಿ ಒಂದೆಡೆಗೆ ಕಂಡು ಬಂದರೆ; ಮತ್ತೊಂದೆಡೆಗೆ ಸಾಹಿತಿಯು ತನ್ನ ಲೇಖನಿಯಿಂದ ಸಮಾಜದ ಲೋಪ-ದೋಷಗಳನ್ನು ಚಿತ್ರಿಸುತ್ತಾನೆ. ಇಂದಿನ ಸಮಾಜದಲ್ಲಿಯ ಜಾತಿಭೇದ, ಬಡವ-ಸಿರಿವಂತನೆಂಬ ಭೇದಭಾವ— ಮುಂತಾದ ಚಿತ್ರಗಳನ್ನು ಸಾಹಿತಿಯು ಜಾಣ್ಮೆಯಿಂದ ಚಿತ್ರಿಸುತ್ತಾನೆ. ಈ ಚಿತ್ರಣವು ನಾಟಕ, ಕಾದಂಬರಿ, ಸಣ್ಣಕಥೆ ಇಲ್ಲವೆ ಪದ್ಯರೂಪದಲ್ಲಿ ಪ್ರಕಟವಾಗುತ್ತದೆ. ಆದುದರಿಂದ ಸಮಾಜದ ಪುನರ್ನಿರ್ಮಾಣ ಮಾಡಲು ಹೊರಟ ಇಂದಿನ ಸರಕಾರವು ಸಾಹಿತ್ಯದಿಂದಲೂ ಕೆಲವು ಅಂಶಗಳನ್ನು ಪಡೆದರೆ ಒಳಿತು. ಈ ದಿಶೆಯಲ್ಲಿ ಸುಧಾರಣೆ ಮಾಡಿದರೆ ಆದರ್ಶ ಸಮಾಜ ನಿರ್ಮಾಣದ ಗುರಿಯು ಸಾಧಿಸಬಲ್ಲದು.

ಭಾರತವು ಹಲವು ಸಂಸ್ಕೃತಿಗಳ ತವರಾಗಿದೆ, ಹಲವು ಧರ್ಮಗಳ ಆಗರವಾಗಿದೆ. ಅದರಲ್ಲಿ ಕರ್ನಾಟಕವಂತೂ ವಿವಿಧ ಭಕ್ತಿಪಂಥಗಳ ನೆಲೆ-ಯಾಗಿದೆ. ಆದಿ ಕಾಲದಿಂದಲೂ ವಿವಿಧ ಧರ್ಮಗಳು, ಈ ಧರ್ಮಗಳನ್ನು ಬೋಧಿಸುವ ಧರ್ಮೋಪದೇಶಕರು, ಮಹಾತ್ಮರು ಈ ಪುಣ್ಯಭೂಮಿಯಲ್ಲಿ ಜನ್ಮತಾಳಿ ಕಾಲಕಾಲಕ್ಕೆ ಸಮಾಜದಲ್ಲಿ ಹಾಳಾಗಿ ಹೋಗುತ್ತಿರುವ ನರತೆ,

ಸಂಸ್ಕೃತಿ, ಪ್ರೀತಿ, ಸಹಕಾರ, ಕಾಯಕ ಮುಂತಾದ ಜೀವನಮೌಲ್ಯಗಳನ್ನು ಕುರಿತು ಜನತೆಗೆ ಎಚ್ಚರಿಕೆಯಿತ್ತಿದ್ದಾರೆ.

ವೇದ-ಉಪನಿಷತ್ತುಗಳು ಜನಸಾಮಾನ್ಯನಿಗೆ ನಿಲುಕದ ಕಠಿಣವಾದ ತತ್ವಗಳನ್ನೊಳಗೊಂಡಿವೆ. ಸುಸಂಸ್ಕೃತನಾದ, ಉಚ್ಚಮಟ್ಟದ ತಿಳುವಳಿಕೆಯುಳ್ಳವನು ಮಾತ್ರ, ಆಳವಾದ ಅಧ್ಯಯನದಿಂದ ಈ ತತ್ವಗಳನ್ನು ತಿಳಿಯಬಹುದಿತ್ತು. ಜನಸಾಮಾನ್ಯನಿಗೆ ಇವುಗಳ ಅಧ್ಯಯನ ಒತ್ತಟ್ಟಿಗಿರಲಿ ಸಮೀಪ ಕೂಡ ಹೋಗುವ ಅಧಿಕಾರವಿರಲಿಲ್ಲ. ಅವನ ಮಟ್ಟಿಗೆ ಅವು ನಿಲುಕದ ನಕ್ಷತ್ರವಾಗಿದ್ದವು.

ಇಲ್ಲಿ ತತ್ವ, ಧರ್ಮ ಮುಂತಾದವುಗಳ ಗಹನವಾದ ವಿವೇಚನೆಯು ನಮ್ಮ ಉದ್ದೇಶವಲ್ಲ. ಆದುದರಿಂದ ಧಾರ್ಮಿಕ ಸಾಹಿತ್ಯ ಹೇಗೆ ಉದಿಸಿದೆಯೆಂಬುದನ್ನು ತಿಳಿಯೋಣ. ಕನ್ನಡ ಸಾಹಿತ್ಯ ಇತಿಹಾಸದ ಪುಟಗಳನ್ನು ತಿರುವುತ್ತಾ ಹೋದರೆ ವಡ್ಡಾರಾಧನೆ ಹಾಗೂ ಕವಿರಾಜಮಾರ್ಗಗಳು ಉಪಲಬ್ಧ ಪ್ರಾಚೀನ ಕೃತಿಗಳೆಂದು ಹೇಳಬಹುದು. ಇವುಗಳಲ್ಲಿ ವಡ್ಡಾರಾಧನೆ ಜೈನತತ್ವವುಳ್ಳ ೧೯ ಕಥೆಗಳನ್ನು ಹೊಂದಿದೆ. ಕವಿರಾಜಮಾರ್ಗವು ಕಾವ್ಯಲಕ್ಷಣಗ್ರಂಥವಾಗಿದೆ. ಮಹಾಕವಿ ಪಂಪನಿಂದ ಅಂದರೆ ಹತ್ತನೆಯ ಶತಮಾನದಿಂದ ಧರ್ಮದೃಷ್ಟಿಯೇ ಸಾಹಿತ್ಯಸೃಷ್ಟಿಗೆ ಕಾರಣವಾಗುತ್ತ ಬಂದಿದೆ. ಹತ್ತನೆಯ ಶತಮಾನದಿಂದ ಸುಮಾರು ಹನ್ನೆರಡನೆಯ ಶತಮಾನದವರೆಗೆ ಚಂಪೂಕಾವ್ಯ ಪ್ರಕಾರವು ಜೈನತತ್ವವನ್ನೊಳಗೊಂಡ ಶ್ರೇಷ್ಠ ಸಾಹಿತ್ಯವನ್ನು ಹೊತ್ತು ತಂದಿದೆ. ಒಂದು ರೀತಿಯಲ್ಲಿ ಕನ್ನಡ ಸಾಹಿತ್ಯದ ಉದಯವೇ ಜೈನ ಸಾಹಿತ್ಯದಿಂದಾಯಿತು ಎಂದೂ ಹೇಳುವದುಂಟು.

ಹತ್ತನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗಿನ ಸಾಹಿತ್ಯ ಅನುಭಾವಸಾಹಿತ್ಯವಲ್ಲ. ಮಹಾಭಾರತ, ರಾಮಾಯಣಗಳ ಕಥಾವಸ್ತುವುಳ್ಳ ಚಂಪೂ ಕಾವ್ಯಗಳು, ತೀರ್ಥಂಕರರ ಚರಿತ್ರೆಯುಳ್ಳ ಜೈನ ಪುರಾಣಗಳು ಈ ಕಾಲದಲ್ಲಿ ಜನ್ಮತಾಳಿವೆ. ಹನ್ನೆರಡನೆಯ ಶತಮಾನದ ನಂತರದ ಸಾಹಿತ್ಯ— ಅನುಭಾವ ಸಾಹಿತ್ಯವೆಂದು ಹೇಳಬಹುದು. ಅನು-

ಭಾವದ ದಿವ್ಯಶಕ್ತಿಯನ್ನು ಹೊತ್ತು ತಂದವರು ೧೨ ನೆಯ ಶತಮಾನದ ಶಿವಶರಣರು. ಈ ವರೆಗೆ ಮೆರೆದಿದ್ದ ಚಂಪೂ ಸಂಪ್ರದಾಯವು ಶಿವಶರಣರ ಕಾಲಕ್ಕೆ ಮಂದಗತಿಯಿಂದ ಸಾಗಿತು. ಶಿವಶರಣರು ಭಾಷಾದೃಷ್ಟಿಯಿಂದ, ಛಂದಸ್ಸಿನ ದೃಷ್ಟಿಯಿಂದ ಕ್ರಾಂತಿಗೈದರು. ತತ್ತ್ವೋಪದೇಶವನ್ನೂ ಕೂಡ ಜನಸಾಮಾನ್ಯನಿಗೆ ಒಗ್ಗುವ ರೀತಿಯಲ್ಲಿ ಮಾಡಲಾರಂಭಿಸಿದರು. ಶಿವನನ್ನೇ ಆರಾಧ್ಯದೇವನನ್ನಾಗಿಟ್ಟುಕೊಂಡ ಈ ಶರಣಸಂಪ್ರದಾಯ ಕರ್ನಾಟಕದಲ್ಲಿ ಮಹಾಕ್ರಾಂತಿಯನ್ನೇ ಉಂಟುಮಾಡಿತು. ಮೇಲು-ಕೀಳು, ಉಚ್ಚ-ನೀಚ, ಬಡವ-ಶ್ರೀಮಂತ ಎಂಬ ವೈಷಮ್ಯದಿಂದ ಕೂಡಿದ ಅಂದಿನ ಸಮಾಜಕ್ಕೆ ಶಿವಶರಣರು ಬೋಧನಾಮೃತದ ಧಾರೆಯನ್ನೆರೆದು ಪರಿಶುದ್ಧಗೊಳಿಸಿದರು. ಛಂದೋಬದ್ಧವಾದ ರಚನೆಗಳ ಬದಲಾಗಿ "ವಚನ" ಸಾಹಿತ್ಯ ಪ್ರಕಾರವು ರೂಢಿಗತವಾಯಿತು.

ಶಿವಶರಣರ ತರುವಾಯದ ಅನುಭಾವಸಾಹಿತ್ಯ ನಿರ್ಮಾತೃಗಳೆಂದರೆ ಹರಿದಾಸರು. ಕನ್ನಡ ನಾಡಿನ ಭಕ್ತಿ ಪರಂಪರೆಯಲ್ಲಿ ಹರಿದಾಸರು ವಚನ ಮಹಾನುಭಾವರ ಸಂಪ್ರದಾಯಕ್ಕೆ ಉತ್ತರಾಧಿಕಾರಿಗಳಾಗಿ ಬಂದ ಮಹಾನುಭಾವರು. ಹರಿದಾಸರು ಶ್ರೀಹರಿಯನ್ನು ಆರಾಧ್ಯದೈವತವನ್ನಾಗಿಟ್ಟುಕೊಂಡು ಶ್ರೀಹರಿಯ ಸ್ತುತಿಯೊಂದಿಗೆ ಸಮಾಜ ಬೋಧನಾಪರವಾದ ಕೀರ್ತನ, ಸುಳಾದಿ, ಉಗಾಭೋಗಗಳನ್ನು ರಚಿಸಿದರು. ಶಿವಶರಣರಂತೆ, ಆತ್ಮಸಾಕ್ಷಾತ್ಕಾರ ಹಾಗೂ ನೀತಿಬೋಧೆಗಳು ದಾಸವರೇಣ್ಯರೆಲ್ಲರ ಗುರಿಯಾಗಿದ್ದವು. ಕನ್ನಡ ವಾಙ್ಮಯದಲ್ಲಿ ವಚನಸಾಹಿತ್ಯಕ್ಕಿದ್ದ ಪ್ರತಿಭೆ ಹಾಗೂ ವಿಶೇಷ ಸ್ಥಾನಗಳು ದಾಸ ಸಾಹಿತ್ಯಕ್ಕೂ ಇವೆ. ಆದುದರಿಂದಲೇ ದಾಸಸಾಹಿತ್ಯ - ಶರಣಸಾಹಿತ್ಯಗಳೆರಡನ್ನೂ ವಿದ್ವಾಂಸರು " ತವನಿಧಿ " ಎಂದು ಕರೆದಿದ್ದಾರೆ. ಕನ್ನಡ ವಾಗ್ದೇವಿಯ ಎರಡು ಕಣ್ಣುಗಳೆಂದೂ ಸ್ತುತಿಸಿದ್ದಾರೆ. ಮಧ್ಯಯುಗದ ವಚನ ಸಾಹಿತ್ಯದಲ್ಲೂ, ದಾಸಸಾಹಿತ್ಯದಲ್ಲೂ ಭಕ್ತರ ಗಾಢ ಭಗವತ್ಪ್ರೀತಿ ಸೂಸಿದೆ; ದಿವ್ಯ ಮಧುರ ಧರ್ಮಸುಧೆ ತುಂಬಿದೆ. ದೈವಭಕ್ತರು ಹಲವಾರು ಶತಮಾನಗಳಿಂದ ಈ ವಚನಗಳನ್ನು-ಕೀರ್ತನೆಗಳನ್ನು ಹಾಡಿ ನಲಿದು ಆತ್ಮೋದ್ಧಾರಮಾರ್ಗವನ್ನು ಕಂಡುಕೊಂಡಿದ್ದಾರೆ. ಮಾನವ ಹೃದಯದ ತಂತಿಗಳನ್ನು ಅವು ಅಂದಿನಂತೆ ಇಂದಿಗೂ

ಮಿಡಿಯುತ್ತವೆ. ಕೆಲವು ವಚನ, ಕೀರ್ತನೆಗಳಂತೂ ಉಜ್ವಲ ಕಾವ್ಯ ಗುಣಗಳಿಗೆ ಪ್ರಸಿದ್ಧವಾಗಿವೆ. ಈ ಸಂಗೀತ ಗುಣವೇ ಅವುಗಳನ್ನು ಚಿರಂತನ ವಾಗಿಸಿದೆ.

ವಿಜಯನಗರ ದೊರೆಗಳ ಆಳಿಕೆಯ ಕಾಲವು ದಾಸ ಸಾಹಿತ್ಯದ ವಸಂತ ಕಾಲವಾಗಿದೆ. ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ದಾಸಸಾಹಿ-ತ್ಯವೂ ಕ್ಷೀಣಿಸುತ್ತ ಬಂದಿರುವದನ್ನು ಕಾಣುತ್ತೇವೆ. ಹರಿದಾಸರು ಕೇವಲ ಮಧ್ವಮತ ಪ್ರಚಾರಕರು ಎಂಬ ಹೇಳಿಕೆಯುಂಟು. ಆದರೆ ಇದು ಸರಿಯಲ್ಲ. ಕೇವಲ ಮಧ್ವಮತ ಪ್ರಸಾರಕಾರ್ಯನನ್ನು ಹರಿದಾಸರು ಕೈಕೊಂಡಿದ್ದರೆ ಹರಿದಾಸಸಾಹಿತ್ಯವು ಶುಷ್ಕವಾಗುತ್ತಿತ್ತು. ಇಷ್ಟೊಂದು ಜನಪ್ರಿಯವಾಗು ತ್ತಿರಲಿಲ್ಲ. ಹರಿದಾಸರ ತರುವಾಯ ಕನ್ನಡ ಸಾಹಿತ್ಯವಾಹಿನಿ ಒಂದಿ-ಲ್ಲೊಂದು ಧರ್ಮತತ್ವದೊಂದಿಗೆ ವಿವಿಧ ರೂಪಗಳಲ್ಲಿ ಮುದ್ದಣನವರೆಗೂ ಹರಿದಿದ್ದಾಳೆ.

**ಭಕ್ತಿಯ ಪ್ರಾಚೀನತೆ-ಭಕ್ತಿಪಂಥಗಳ ಮೂಲ:**

ನೀರಿನ ಪ್ರವಾಹವು ಬೇರೆ ಬೇರೆ ಪ್ರದೇಶಗಳಲ್ಲಿ ಹಾಯ್ದು ಹೋಗು ವಾಗ ಆಯಾ ಪ್ರದೇಶದ ಭೂಗುಣಗಳಾದ ಉಪ್ಪು, ಸೌಳು, ಸಿಹಿ ಮುಂತಾದ ರುಚಿಯನ್ನು ಮೈಗೂಡಿಸಿಕೊಳ್ಳುವಂತೆ— ಮನುಷ್ಯನಲ್ಲಿಯ ಪ್ರೇಮರಸವು ಕೂಡ ವಹಿಸುತ್ತಿರುವ ಪಾತ್ರಗಳಿಗೆ ತಕ್ಕಂತೆ ಗುಣಧರ್ಮದಲ್ಲಿ ಬದಲಾ-ವಣೆ ಹೊಂದುತ್ತ ಹೋಗುತ್ತದೆ. ವಾತ್ಸಲ್ಯ, ಪ್ರೀತಿ, ಅಕ್ಕರತೆ, ಪ್ರಣಯ, ಗೌರವ, ಭಕ್ತಿ ಇವೇ ಆ ಗುಣಧರ್ಮಗಳೆಂದು ಕರೆಯಲ್ಪಡುತ್ತವೆ. ಇವೆಲ್ಲಾ ಪ್ರೇಮರಸದ ಪ್ರತಿರೂಪಗಳಾಗಿವೆ. ಹಾಗಾದರೆ ಭಕ್ತಿರಸವೂ ಪ್ರೇಮರಸದ ಒಂದು ರೂಪವೆಂದಂತಾಯಿತಲ್ಲವೇ? ಈ ಭಕ್ತಿರಸದ ಮೂಲ ಉಗಮಕ್ಕೆ ದೇವರ ಸಂಕೇತವೆನಿಸಿದ ಮೂರ್ತಿ – ಪ್ರತಿಮೆಗಳು ಕಾರಣವಾಗಿವೆ. ಜಗತ್ತಿನ ಪ್ರತಿಯೊಂದು ಜನಾಂಗವೂ ಒಂದಿಲ್ಲೊಂದು ರೂಪದಿಂದ ಮೂರ್ತಿಪೂಜೆಯನ್ನು ಹೊಂದಿದೆ. ಕೆಲವೆಡೆ ಸಾಕಾರವಿದ್ದರೆ ಇನ್ನು ಕೆಲವೆಡೆ ನಿರಾಕಾರವಿದೆ. ಭಾರತದಲ್ಲಿ ಈ ಮೂರ್ತಿ ಪೂಜೆಯು ಪ್ರಾಚೀನ-

ತೆಯು ಹರಪ್ಪಾ ಮೊಹೆಂಜೋದಾರೊ ಸಂಸ್ಕೃತಿಗಳ ವರೆಗೂ ಹೋಗುತ್ತದೆ. ಇಲ್ಲಿಯ ಅವಶೇಷಗಳ ಆಧಾರದಿಂದ, ಮೊದಲಿನಿಂದಲೂ ಭಕ್ತಿಯ ಪ್ರವಾಹವು ಒಂದಿಲ್ಲೊಂದು ರೀತಿಯಲ್ಲಿ ಒಂದಿಲ್ಲೊಂದು ಮಾರ್ಗದಲ್ಲಿ ಹರಿಯುತ್ತ ಬಂದಿದೆ ಎಂದು ಹೇಳಬಹುದು. ಒಂದೆಡೆ ವಿಷ್ಣುಪರವಾಗಿದ್ದರೆ, ಮತ್ತೊಂದೆಡೆ ಶಿವಪರವಾಗಿದೆ.

ಕರ್ನಾಟಕದಲ್ಲಿ ಶೈವ ಪಂಥ, ವೈಷ್ಣವ ಪಂಥಗಳೆರಡೂ ಎದುರು-ಬದುರಾಗಿ ನಿಂತವು. ರಾಜಾಶ್ರಯವೂ ಇವುಗಳಿಗೆ ಕಾಲಾನುಕ್ರಮದಿಂದ ಲಭಿಸಿತು. ರಾಜಾಶ್ರಯದ ಭದ್ರವಾದ ರಕ್ಷೆಯಲ್ಲಿ, ಅಪಾರವಾದ ಜನಾ-ದರಣೆಯ ಪಾಲನೆಯಲ್ಲಿ ಈ ಎರಡೂ ಭಕ್ತಿಪಂಥಗಳು ಕರ್ನಾಟಕದಲ್ಲಿ ಬಹುಕಾಲ ಬಾಳಿದವು. ತತ್ವವಿಚಾರದಿಂದಲೂ ಎಲ್ಲಾ ಭಕ್ತಿಪಂಥಗಳು ಕ್ರಾಂತಿಯ ಕಹಳೆಯನ್ನೇ ಊದಿವೆ. ವೇದ, ಉಪನಿಷತ್ತುಗಳಲ್ಲಡಗಿದ ಗಹನವಾದ ತತ್ವಗಳನ್ನು ಸುಲಭವಾಗಿಸಿ ಜನಸಾಮಾನ್ಯನಿಗೆ ತಿಳಿಸುವ ಪ್ರಯತ್ನ ಮಾಡಿವೆ.

ಕ್ರಿ. ಶ. ೧೨ನೆಯ ಶತಮಾನದಿಂದ ೧೫ನೆಯ ಶತಮಾನದ ಕಾಲ ವೆಂದರೆ ಕರ್ನಾಟಕದಲ್ಲಿ ಅತಿ ಅದ್ಭುತ ತತ್ವಗಳ, ಉನ್ನತ ವಿಚಾರಗಳ ತಾಕಲಾಟದ ಕಾಲವಾಗಿದೆ. ಈ ಕಾಲದಲ್ಲಿ ಬಸವಣ್ಣನವರ ವೀರಶೈವ ಧರ್ಮವೂ, ಶ್ರೀ ರಾಮಾನುಜರ ವಿಶಿಷ್ಟಾದ್ವೈತವೂ, ಶ್ರೀ ಮಧ್ವಾಚಾರ್ಯರ ದ್ವೈತಸಿದ್ಧಾಂತವೂ ಉಗಮಹೊಂದಿ ಪರತತ್ವ ವಿವೇಚನೆಯನ್ನು ಉಚ್ಚ-ಮಟ್ಟಕ್ಕೇರಿಸಿದವು. ಮಧ್ವಾಚಾರ್ಯರು ರಾಮಾನುಜರ ಮೂರು ತತ್ವ ಗಳನ್ನು ಖಂಡಿಸಿ ಜೀವಾತ್ಮ, ಪರಮಾತ್ಮ ಎಂಬ ಎರಡೇ ತತ್ವಗಳನ್ನು ಒಪ್ಪಿಕೊಂಡು ಜೀವಾತ್ಮ ಪರಮಾತ್ಮ ಪರಸ್ಪರ ಭಿನ್ನರೆಂದೂ ಅವರ ಭಿನ್ನತೆ ಶಾಶ್ವತವೆಂದೂ ಸಾಧಿಸಿದರು. ತಮ್ಮ ತಮ್ಮ ಮತಪ್ರಚಾರಕ್ಕೆ ಇವರೆಲ್ಲಾ ಭಕ್ತಿಪಂಥವನ್ನೇ ಬಳಸಿಕೊಂಡಿದ್ದಾರೆ.

ತತ್ವವಿವೇಚನೆಗೂ ಭಕ್ತಿಮಾರ್ಗಕ್ಕೂ ತಳುಕು ಹಾಕಿ ಹೃದಯಂಗಮ ವಾಗಿ ಉಪದೇಶ ಮಾಡಿದವರೆಂದರೆ ದ್ವೈತಸಿದ್ಧಾಂತದ ಪ್ರವರ್ತಕರಾದ ಮಧ್ವಾಚಾರ್ಯರೆಂದು ಹೇಳಬೇಕು. ಕರ್ನಾಟಕ ಹರಿದಾಸ ಪರಂಪರೆಗೆ ಮಧ್ವಾಚಾರ್ಯರೇ ಮೂಲಪುರುಷರು. ತಮ್ಮ ಸಿದ್ಧಾಂತದಲ್ಲಿ ಪ್ರಮಾಣ

ಗಳ ಸ್ವರೂಪವನ್ನು ಕೂಲಂಕಷವಾಗಿ ನಿರೂಪಿಸಿದ್ದಾರೆ. ಇದೇ ಕಾರ್ಯವು ಮುಂದೆ ಅನೇಕ ಜನರಿಂದ ಮುಂದುವರಿಸಲ್ಪಟ್ಟಿತು. ಮಧ್ವಾಚಾರ್ಯರ ನಂತರದ ಹರಿದಾಸರೆಲ್ಲಾ ತಮ್ಮ ಕೀರ್ತನೆಗಳಿಗೆ ಮಧ್ವಮತವನ್ನು ಅಡಿ-ಕಟ್ಟಾಗಿ ಮಾಡಿಕೊಂಡು ನೀತಿಬೋಧನಾಪರವಾದ ಸುಂದರ ಕೀರ್ತನೆಗಳನ್ನು ರಚಿಸಿದರು. ಈ ಮಾತನ್ನು ಸುಲಕ್ಷಿಸಿಯೇ ಹಲವರು, ಹರಿದಾಸರು ಮಧ್ವಮತ ಪ್ರಚಾರಕರೆಂದು ಹೇಳುವದುಂಟು. ವಿಠ್ಠಲ ಭಕ್ತಿಸಂಪ್ರ-ದಾಯಕ್ಕೂ ಶ್ರೀಮಧ್ವಾಚಾರ್ಯರೇ ಕಾರಣೀಭೂತರು. ಈಗ ಮರಾಠಿಗ-ನಾದ ವಿಠ್ಠಲನು ಇವರ ಕಾಲಕ್ಕೆ ಕನ್ನಡಿಗನಾಗಿದ್ದ.

ಭಕ್ತಿಪಂಥಗಳ ಪ್ರಾಚೀನತೆ ಮತ್ತು ಪರಿಚಯಗಳನ್ನು ತಿಳಿದಾದ ಮೇಲೆ ಕರ್ನಾಟಕ ಹರಿದಾಸ ಪರಂಪರೆಯ ಬಗೆಗೂ ತಿಳಿಯುವದು ಆವಶ್ಯಕ. ಮಹಾರಾಷ್ಟ್ರದ ಸಂತರಂತೆ ಕರ್ನಾಟಕದ ಹರಿದಾಸರೂ ಭಕ್ತಿಪಂಥಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ನರಹರಿತೀರ್ಥರು, ಶ್ರೀಪಾದರಾಯರು, ವ್ಯಾಸರಾಯರು,ರಾಘವೇಂದ್ರರು ಪೀಠಸ್ಥರಾದರೆ, ಪುರಂದರ-ಕನಕಾದಿಗಳು ದೀಕ್ಷಾಹರಿದಾಸರಾಗಿದ್ದಾರೆ. ಅಚಲಾನಂದರೇ ದಾಸಸಾಹಿತ್ಯದ ಪ್ರಥಮ ವ್ಯಕ್ತಿಗಳೆಂಬ ಹೇಳಿಕೆಯಿದೆ. ಆದರೆ ಅಚಲಾನಂದ ವಿರಚಿತ ಕೀರ್ತನೆಗಳನ್ನು ವೀಕ್ಷಿಸಲಾಗಿ ಅವೆಲ್ಲವುಗಳ ಭಾಷೆ ಹೊಸಗನ್ನಡದಂತೆ ಇರುವದರಿಂದ ಆ ಹೇಳಿಕೆಯು ಸರಿಯೆನಿಸಲಾರದು.

ಆದರೆ ೧೩ನೆಯ ಶತಮಾನದ ನರಹರಿತೀರ್ಥರೇ ದಾಸಸಾಹಿತ್ಯದ ವ್ಯವಸ್ಥಿತ ಬೆಳವಣಿಗೆಗೆ ನಾಂದಿ ಹಾಡಿದರೆಂದು ಖಚಿತವಾಗಿ ಹೇಳಬಹುದು. ನರಹರಿತೀರ್ಥರು ಮಧ್ವಾಚಾರ್ಯರ ನಂತರ ಪೀಠಾರೋಹಣ ಮಾಡಿದರು. ಮಧ್ವಸಿದ್ಧಾಂತ ಸೌರಭವನ್ನು ಬೀರುವ ಅನೇಕ ಕೀರ್ತನೆಗಳನ್ನು ನರಹರಿ ತೀರ್ಥರು ರಚಿಸಿದ್ದಾರೆ. ಇವರ ಪರಂಪರೆಯನ್ನೇ ನಂತರ ಬಂದ ಹರಿದಾಸರೆಲ್ಲಾ ಬೆಳೆಸಿಕೊಂಡು ಬಂದಿದ್ದಾರೆ.

ನರಹರಿತೀರ್ಥರ ನಂತರ ದಾಸಸಾಹಿತ್ಯದಲ್ಲಿ ಕೇಳಿಬರುವ ಮತ್ತೊಂದು ಪ್ರಮುಖ ಹೆಸರೆಂದರೆ ಶ್ರೀಪಾದರಾಯರದು. ಕಾಲ ಕ್ರಿ. ಶ. ಸು. ೧೪೨೨ ಇವರ ಕಾಲದಲ್ಲಂತೂ ದಾಸಸಾಹಿತ್ಯ ಮೆರುಗನ್ನು ಪಡೆಯಿತು. ಶ್ರೀಪಾದ-ರಾಯರು ವೇದಾದಿ ಸಕಲ ಶಾಸ್ತ್ರಗಳಲ್ಲಿ, ಕನ್ನಡ ಸಾಹಿತ್ಯ, ಸಂಗೀತಗಳಲ್ಲಿ

ಪರಿಣತರಿದ್ದರು. ಸಂಗೀತದಲ್ಲಿ ಸುಳಾದಿಯೆಂಬ ಪರಿಭಾಷೆಯಿಂದ ಕರ್ನಾಟಕ ಗಾಯನಕ್ಕೆ ಹೊಸ ಬೆಳಕನ್ನಿತ್ತ ಕೀರ್ತಿ ಶ್ರೀಪಾದರಾಯರಿಗೆ ಸಲ್ಲುತ್ತದೆ.

ದಾಸಸಾಹಿತ್ಯದ ಉಜ್ವಲ ಪರಂದರೆಯನ್ನು ಶ್ರೀಪಾದರಾಯರ ತರುವಾಯ ಬೆಳೆಸಿದವರೆಂದರೆ ವ್ಯಾಸರಾಯರು. ಇವರು ಬಾಳಿದ ಕಾಲ ಕ್ರಿ. ಶ. ಸು. ೧೪೪೭ ರಿಂದ ೧೫೩೯ ಎಂದು ವಿದ್ವಾಂಸರ ಮತ. ಮಠಾಧಿಪತಿಗಳಾಗಿ ಒಂದೆಡೆಗೆ ರಾಜಗುರುಗಳೆನಿಸಿದರೆ, ಮತ್ತೊಂದೆಡೆ ಧರ್ಮೋಪದೇಶಕರೂ ಆಗಿದ್ದರು. ಸಾಳುವ ನರಸಿಂಹನ ಆಳಿಕೆಯ ಕಾಲದಿಂದ ಅಚ್ಯುತರಾಯನ ಆಳಿಕೆಯವರೆಗೆ ಸುಮಾರು ೬೦ ವರ್ಷಗಳ ಕಾಲ ಸಕಲ ರಾಜ ಮಹಾರಾಜರಿಂದ ಸನ್ಮಾನಿಸಲ್ಪಟ್ಟರು.

ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ದೊರೆಯೆನಿಸಿದ ಕೃಷ್ಣದೇವ ರಾಯನು ವ್ಯಾಸರಾಯರನ್ನು ಸನ್ಮಾನಿಸಿದ್ದ. ಅಂಕಿತಪ್ರದಾನ ಪದ್ಧತಿ ಇವರಿಂದಲೇ ಆರಂಭವಾಯಿತು. ವ್ಯಾಸರಾಯರು ತಮ್ಮ ನೇತೃತ್ವದಲ್ಲಿ "ದಾಸಕೂಟ"ವನ್ನು ಏರ್ಪಡಿಸಿದರು. ನಂತರ ಬಂದ ವಾದಿರಾಜ, ಪುರಂದರಾದಿಗಳು ಈ ದಾಸಕೂಟಕ್ಕೆ ಸೇರಿದವರಾಗಿದ್ದಾರೆ.

ಮೊದಮೊದಲು ಕೇವಲ ದೇವತಾಸ್ತುತಿಯನ್ನು ಹೊಂದಿದ್ದ ಹರಿದಾಸರ ಕೀರ್ತನೆಗಳು ಬರುಬರುತ್ತಾ ನೀತಿಬೋಧಕವೂ, ಅಲಂಕಾರ ಸಂಯೋಜಿತವೂ ಆದವು. ಕ್ರಿ. ಶ. ಸು. ೧೪೮೪ ರಿಂದ ೧೫೬೪ ರಲ್ಲಿದ್ದವರೆಂದು ಹೇಳಲಾದ ಪುರಂದರದಾಸರ ಕಾಲವಂತೂ ದಾಸಸಾಹಿತ್ಯದ ಸುವರ್ಣ ಕಾಲವೆಂದು ಹೇಳಬಹುದು. ಕರ್ನಾಟಕಸಂಗೀತ ಹಾಗೂ ಸಾಹಿತ್ಯಗಳ ಸಂಗಮದ ಕಾಲವಿದು. ಧಾರ್ಮಿಕ ಕ್ಷೋಭೆ, ಸಾಮಾಜಿಕ ಅಶಾಂತಿ, ಪರಸ್ಪರ ವೈಷಮ್ಯ ಮುಂತಾದವನ್ನೆಲ್ಲಾ ಗಮನಿಸಿ, ಈ ದುಷ್ಟ ಶಕ್ತಿಗಳಿಂದಾಗಿ ಹಾಳಾಗಿ ಹೋಗುತ್ತಿರುವ ಅಂದಿನ ಸಮಾಜವನ್ನು ಕುರಿತು ಪುರಂದರ ದಾಸರು ಮಮ್ಮಲನೆ ಮರುಗಿದ್ದಾರೆ. ಅಪೂರ್ವ ಕವಿತ್ವಶಕ್ತಿಯಿಂದ ಅಂದಿನ ಸಮಾಜದ ನ್ಯೂನತೆಯನ್ನು ಚಿತ್ರಿಸಿದ್ದಾರೆ. 'ಪುರಂದರವಿಠಲ' ಎಂಬುದು ಇವರ ಅಂಕಿತ. ಇವರು ಸಿರಿತನದಲ್ಲಿದ್ದವರು. ಇಚ್ಛೆಯ ತಿರುಕರಾದುದರಿಂದ, ಧನಮದದಿಂದ ಕೂಡಿದ ಡಾಂಭಿಕ ವ್ಯಕ್ತಿಗಳನ್ನು

ಕಟುವಾಗಿ ಟೀಕಿಸಿದ್ದಾರೆ. ಇವರು ವ್ಯಾಸರಾಯರ ಶಿಷ್ಯರು. ದಾಸ-ಪರಂಪರೆಯಲ್ಲಿಯೇ ತಮ್ಮ ಅಲಗಿನಂಥ ಹದನಾದ ಬಿರುನುಡಿಗಳಿಗಾಗಿ, ಕಟುವಾದ ವ್ಯಂಗ್ಯಕ್ಕಾಗಿ ಪುರಂದರದಾಸರು ಖ್ಯಾತಿವೆತ್ತವರು. ಕಂಡ-ದ್ದನ್ನು ಕಂಡಂತಾಡುವ ಸ್ವಭಾವದವರು. ಕೀರ್ತನೆಗಳಲ್ಲಿ ದೇಶಿವಾಣಿಯ ಬಳಕೆಯನ್ನು ಧಾರಾಳವಾಗಿ ಮಾಡಿದರು.

ಪುರಂದರದಾಸರ ಜಾಡಿನಲ್ಲಿಯೇ ಸಾಗಿದ ಮತ್ತೊಬ್ಬ ದಾಸ ಶ್ರೇಷ್ಠ ರೆಂದರೆ ಕನಕದಾಸರು. ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಬಾಳಿದ ಇವರು ಕಾಗಿನೆಲೆಯ ಆದಿಕೇಶವ ಸ್ವಾಮಿಯನ್ನು ಆರಾಧ್ಯದೈವತವನ್ನಾಗಿ ಮಾಡಿಕೊಂಡಿದ್ದರು. ಕೀಳುಕುಲದಲ್ಲಿ ಜನಿಸಿದ್ದರೂ ಪೂರ್ವಜನ್ಮದ ಸಂಸ್ಕಾರದ ಫಲದಿಂದ ದಾಸವರೇಣ್ಯರಾದರು. ಕನಕದಾಸರ ಅಚಲ-ಶ್ರದ್ಧೆಯ ಸಂಕೇತವಾಗಿ ಉಡುಪಿಯ ಕನಕನ ಕಿಂಡಿ ಇಂದಿಗೂ ಪ್ರಸಿದ್ಧ ವಾಗಿದೆ. ಬೋಧನಾಪರ ಕೀರ್ತನೆಗಳನ್ನಲ್ಲದೇ ಕನಕದಾಸರು ರಾಮ ಧಾನ್ಯ ಚರಿತ್ರೆ, ಮೋಹನತರಂಗಿಣಿ ಎಂಬೆರಡು ಕಾವ್ಯಕೃತಿಗಳನ್ನು ರಚಿಸಿ ದಾಖಲೆ ಸ್ಥಾಪಿಸಿದ್ದಾರೆ. 'ಕಾಗಿನೆಲೆಯಾದಿಕೇಶವ' ಎಂಬುದು ಕನಕ-ದಾಸರ ಅಂಕಿತ.

ಇಂತು ನರಹರಿತೀರ್ಥರಿಂದ ಬೀಜಾರೋಪಣವಾದ ದಾಸಸಾಹಿತ್ಯ ವೃಕ್ಷವು ನಂತರ ಬಂದ ಹರಿದಾಸರೆಲ್ಲರಿಂದ ಬೆಳೆದು ಹೆಮ್ಮರವಾಯಿತು. ಅಮೃತಸಮಾನವಾದ ಫಲ ಧರಿಸಿತು. ಈ ಫಲಗಳನ್ನು ಕರ್ನಾಟಕದ ಜನತೆ ಕಾಲಕಾಲಕ್ಕೆ ಸವಿದು ಆನಂದ ತುಂದಿಲರಾಗಿದ್ದಾರೆ. ಇದು ದಾಸ ಸಾಹಿತ್ಯದ ಪ್ರಥಮ ಘಟ್ಟದ ಬೆಳವಣಿಗೆ ಹಾಗೂ ಸಾಧನೆಯಾಯಿತು. ಪುಣ್ಯಭೂಮಿಯಾದ ಈ ಕರ್ನಾಟಕದಲ್ಲಿ ಇನ್ನೂ ಅನೇಕ ಮಹಾಪುರುಷರು (ದಾಸರು) ಜನಿಸಿ ದಾಸ ಪರಂಪರೆಯನ್ನು ಮುಂದುವರಿಸಿದರು. ಇವರೆಲ್ಲಾ ದಾಸ ಪರಂಪರೆಯ ದ್ವಿತೀಯ ಘಟ್ಟಕ್ಕೆ ಸೇರಿದವರಾಗಿದ್ದಾರೆ.

ಹದಿನಾರನೆಯ ಶತಮಾನಕ್ಕೆ ಪುರಂದರ-ಕನಕಾದಿ ದಾಸವರೇಣ್ಯ ರಿಂದ ದಾಸಸಾಹಿತ್ಯದ ಪ್ರಥಮ ಘಟ್ಟದ ಮುಕ್ತಾಯವಾದ ನಂತರ ಮಧ್ಯ ದಲ್ಲಿ ಸುಮಾರು ಎಂಭತ್ತು ವರ್ಷಗಳ ಕಾಲ ತಟಸ್ಥವಾಗಿದ್ದ ದಾಸಪರಂಪ-ರೆಯು, ಸುಮಾರು ೧೬೮೭ ರಲ್ಲಿ ವಿಜಯದಾಸರಿಂದ ಪುನಃ ಜಾಗೃತ-

ವಾಯಿತು. ಆದುದರಿಂದ ವಿಜಯ, ಜಗನ್ನಾಥ, ಗೋಪಾಲದಾಸಾದಿಗಳೆಲ್ಲ ರನ್ನು ದ್ವಿತೀಯ ಘಟ್ಟಕ್ಕೆ ಸೇರಿದವರೆಂದು ಹೇಳಬಹುದು. ದ್ವಿತೀಯ ಘಟ್ಟವೆಂದರೆ ಯಾವ ಬದಲಾವಣೆಯೂ ಇಲ್ಲದೆ ನಡುವೆ ತಟಸ್ಥವಾದ ಹರಿದಾಸ ಪರಂಪರೆ, ನಂತರ ಮುಂದುವರಿದ ಕಾಲವೆಂದಿಷ್ಟೆ ತಿಳಿಯಬೇಕು. ದ್ವಿತೀಯ ಘಟ್ಟದ ದಾಸವರೇಣ್ಯರೂ ಶ್ರೀಹರಿಯನ್ನೇ ಆರಾಧ್ಯ ದೈವತವನ್ನಾಗಿಟ್ಟುಕೊಂಡು ಸಗುಣೋಪಾಸನೆಯನ್ನೇ ಮಾಡಿದ್ದಾರೆ. ಮೊದಲಿನ ದಾಸರಂತೆ, ಆತ್ಮಬೋಧೆ, ನೀತಿಬೋಧೆ, ಹರಿಸ್ತುತಿಪರವಾದ ಕೀರ್ತನೆಗಳನ್ನು ರಚಿಸಿದ್ದಾರೆ.

ದ್ವಿತೀಯ ಘಟ್ಟದ ದಾಸರಲ್ಲಿ ವಿಜಯದಾಸರು ಪ್ರಮುಖರು ಮತ್ತು ಆದ್ಯರು. (೧೬೮೨) ಪುರಂದರದಾಸರಿಂದ ಪ್ರೇರಿತರಾಗಿ, ವಿರಾಗಿಗಳಾದರು. ಶ್ರೀಹರಿಯ ಸೇವೆಗಾಗಿ ಶರೀರವನ್ನು ಮುಡಿಪಿಟ್ಟರು. ವಿಜಯದಾಸರು ಅನೇಕ ಕೀರ್ತನೆಗಳನ್ನೂ ತತ್ವ ಗರ್ಭಿತವಾದ ಸುಳಾದಿಗಳನ್ನೂ ರಚಿಸಿದ್ದಲ್ಲದೇ, ಅನೇಕ ಜನರಿಗೆ ಹರಿದಾಸ ದೀಕ್ಷೆಯನ್ನಿತ್ತು ದಾಸಪರಂಪರೆಯ ಬಳಗವೊಂದನ್ನು ನಿರ್ಮಿಸಿ ಮುನ್ನಡೆಸಿದರು. ಆದುದರಿಂದ ವಿಜಯದಾಸರನ್ನು ದಾಸಪರಂಪರೆಯ ಪುನರುಜ್ಜೀವನಗೊಳಿಸಿದ ಮಹಾತ್ಮರೆಂದು ಕರೆಯುವುದುಂಟು. 'ವಿಜಯವಿಠ್ಠಲ' ಎಂಬ ಅಂಕಿತ ಇವರದು. ಅನೇಕ ತೀರ್ಥ ಕ್ಷೇತ್ರಗಳನ್ನು ಸಂಚರಿಸಿ ಅಪಾರವಾದ ಲೋಕಾನುಭವವುಳ್ಳ ಆಧ್ಯಾತ್ಮ ಪುರುಷರಿವರು.

ವಿಜಯದಾಸರ ತರುವಾಯದ ಪ್ರಮುಖ ದಾಸರೆಂದರೆ ಅವರ ಶಿಷ್ಯರಾದ ಗೋಪಾಲದಾಸರು. ಇವರ ಕಾಲ ಕ್ರಿ. ಶ. ಸು. ೧೭೨೧–೧೭೬೨. ಭಾಗಣ್ಣ ಎಂಬುದು ಇವರ ಮೊದಲ ಹೆಸರು. "ಭಕ್ತಿಯಲಿ ಭಾಗಣ್ಣ" ಎಂದು ಇವರ ಖ್ಯಾತಿ. "ಗೋಪಾಲವಿಠ್ಠಲ"– ಇವರ ಅಂಕಿತ. ಗೋಪಾಲದಾಸರ ತಮ್ಮಂದಿರೂ ದಾಸಪರಂಪರೆಗೆ ಸೇರಿದ್ದರೆಂದು ಹೇಳಲಾಗಿದೆ. ಅನೇಕ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಎಷ್ಟೋ ಹರಿಸ್ತುತಿಯುಳ್ಳ ಕೀರ್ತನೆಗಳನ್ನು ರಚಿಸಿದ್ದಾರೆ. ಗುರುಗಳಾದ ವಿಜಯದಾಸರ ಆಜ್ಞೆಯ ಮೇರೆಗೆ ಜಗನ್ನಾಥದಾಸರಿಗೆ ನಾಲ್ವತ್ತು ವರ್ಷ ಆಯುಷ್ಯದಾನ ಮಾಡಿದರೆಂದು ಪ್ರತೀತಿ.

ಗೋಪಾಲದಾಸರ ತರುವಾಯ ಅವರ ಶಿಷ್ಯತ್ವ ವಹಿಸಿದ ಜಗನ್ನಾಥ ದಾಸರು ದಾಸಸಾಹಿತ್ಯದಲ್ಲಿ ಗಣ್ಯರು. ಇವರು ಬಾಳಿದ ಕಾಲ ಕ್ರಿ. ಶ. ೧೭೨೮ ರಿಂದ ೧೮೦೯ ಎಂದು ಹೇಳಬಹುದು. ಜಗನ್ನಾಥದಾಸರೂ ಹರಿ-ಸ್ತುತಿಪರವಾದ, ಲೋಕ-ನೀತಿಯುಕ್ತ ಕೀರ್ತನೆಗಳನ್ನು ರಚಿಸಿದ್ದಾರೆ. ಅಲ್ಲದೇ "ಹರಿಕಥಾಮೃತಸಾರ" ಎಂಬ ದ್ವೈತಸಿದ್ಧಾಂತದ ಕೈಪಿಡಿಯಂತಿ-ರುವ ಕಾವ್ಯಕೃತಿಯನ್ನು ರಚಿಸಿದ್ದಾರೆ. ಮಾಧ್ವಮತದ ಅನುಯಾಯಿ ಗಳಿಗೆ ಇದೊಂದು ಅಮೂಲ್ಯ ಆಸ್ತಿಯಾಗಿದೆ. ಜಗನ್ನಾಥದಾಸರ ತರು-ವಾಯ ಪ್ರಸನ್ನವೆಂಕಟದಾಸರು, ಮಹಿಪತಿದಾಸರು, ಹೆಳವನಕಟ್ಟೆ ಗಿರಿ-ಯಮ್ಮ ಮೊದಲಾದವರು ವಿಶೇಷ ಪ್ರಸಿದ್ಧಿ ಪಡೆದಿದ್ದಾರೆ. ಶ್ರೀಹರಿಯನ್ನು ಬಾಲ್ಯ ರೂಪದಲ್ಲಿಯೋ, ಮುದ್ದು ಕೃಷ್ಣನಾಗಿದ್ದಂತೆಯೋ ಭಾವಿಸಿ ಅನೇಕ ಕೀರ್ತನೆಗಳನ್ನು ಹಾಡಿದ್ದಾರೆ. ಬೆಣ್ಣೆ ಕದಿಯುವಾಗ, ಗೋಪಿಕಾಸ್ತ್ರೀಯ ರೊಡನೆ ಆಡುವಾಗ, ತುಂಟ ಕೃಷ್ಣನಾಗಿ ಸ್ತುತಿಸಲ್ಪಟ್ಟಿದ್ದಾನೆ. ಈ ಮೇಲೆ ವಿವರಿಸಿದ ದಾಸವರೇಣ್ಯರೆಲ್ಲರೂ ಭಾಷೆಯ ದೃಷ್ಟಿಯಿಂದ, ಭಕ್ತಿಯದೃಷ್ಟಿ ಯಿಂದ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿದ್ದಾರೆ. ನರಹರಿತೀರ್ಥರಿಂದ ಉದಯಿಸಿದ ದಾಸಸಾಹಿತ್ಯಭಾನು ಹೆಳವನಕಟ್ಟೆ ಗಿರಿಯಮ್ಮನ ವರೆಗೂ ಅವ್ಯಾಹತವಾಗಿ, ದೇದೀಪ್ಯಮಾನನಾಗಿ ಬೆಳಗಿದ್ದಾನೆ. ೧೮ ನೆಯ ಶತ-ಮಾನದ ಹೆಳವನಕಟ್ಟೆ ಗಿರಿಯಮ್ಮನನ್ನೂ ಭಾಗವತ ಸಂಪ್ರದಾಯಕ್ಕೆ ಜೋಡಿಸಿ ಹರಿದಾಸರ ಹೆಸರುಗಳಲ್ಲಿ ಸೇರಿಸುವದು ವಿಹಿತ. "ಹೆಳವನಕಟ್ಟೆ ರಂಗ" ಎಂಬುದು ಇವಳ ಅಂಕಿತವಾಗಿದೆ.

ಈ ವರೆಗೆ ಕರ್ನಾಟಕದ ಪ್ರಮುಖದಾಸರನ್ನು ಕುರಿತು ಪ್ರಾಥಮಿಕ ವಿವರಣೆಯನ್ನು ಅರಿತಂತಾಯಿತು. ಈಗ ದಾಸರು ಬೋಧಿಸಿದ ನೀತಿ, ದಾಸ ಸಾಹಿತ್ಯದ ಸ್ವರೂಪಗಳನ್ನು ಕುರಿತು ವಿವೇಚಿಸುವಾ.

ಸಂಗೀತ, ಸಾಹಿತ್ಯ, ಮತಬೋಧನೆ, ನೀತಿಬೋಧೆ, ಸಮಾಜರಚನೆ ಗಳ ವಿಷಯದಲ್ಲಿ ಹರಿದಾಸರು ಮಾಡಿದ ಸೇವೆ ಅಪಾರವಾದುದು. ಸಮಾಜ ದಲ್ಲಿ ನೈತಿಕ ಉನ್ನತಿಯನ್ನು ಸಾಧಿಸುವದೇ ಎಲ್ಲಾ ದಾಸರ ಗುರಿಯಾಗಿತ್ತು. ಹೀಗಾಗಿ ಅವರ ಕೀರ್ತನೆಗಳಲ್ಲಿ ಮತ ಪ್ರಚಾರಕ್ಕಿಂತ ನೀತಿಬೋಧೆ, ಶುದ್ಧಾ ಚರಣೆ, ಹರಿಭಕ್ತಿ ಸಾಧನೆ ಮುಂತಾದವುಗಳೇ ಪ್ರಮುಖವಾಗಿ ಗೋಚರಿಸು

ತ್ತವೆ. ಸಂಗೀತದ ದೃಷ್ಟಿಯಿಂದ ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆಂದು ಕರೆಯಲ್ಪಡುತ್ತಾರೆ. ವಿವಿಧ ರಾಗ-ತಾಳಗಳಲ್ಲಿ ಇನ್ನಿತರ ಎಲ್ಲ ದಾಸರೂ ಕೀರ್ತನೆಗಳನ್ನು ರಚಿಸಿದ್ದಾರೆ. ಹೀಗಾಗಿ ಈ ಕೀರ್ತನೆಗಳಿಂದಾಗಿ ಸಂಗೀತ ಶಾಸ್ತ್ರವು ಒಂದಿಲ್ಲೊಂದು ರೀತಿಯಲ್ಲಿ ಕನ್ನಡ ನಾಡಿನಲ್ಲಿ ಉಳಿದು ಬಂದಿದೆ.

ಎರಡನೆಯದಾಗಿ ಸಾಹಿತ್ಯ. ಸಾಹಿತ್ಯವು ಸಮಾಜದ ಕೈಗನ್ನಡಿಯೆಂಬಂತೆ ಕರ್ನಾಟಕದ ಹರಿದಾಸರ ಕೀರ್ತನೆಗಳಲ್ಲಿ ಅಂದಿನ ಸಮಾಜ ಚಿತ್ರಣ ದೊರೆಯುತ್ತದೆ. ಪದಸಂಯೋಜನೆ, ಪ್ರಾಸಗಳ ನಿಯತವಾದ ಪರಿಪಾಲನೆಗಳಿಂದಲೂ, ಅಲಂಕಾರಗಳ ಹಿತಮಿತವಾದ ಔಚಿತ್ಯಪೂರ್ಣ ಬಳಕೆಯಿಂದಲೂ ಹರಿದಾಸ ವಿರಚಿತ ಕೀರ್ತನೆಗಳು ಉಚ್ಚಮಟ್ಟದವಾಗಿವೆ. ಉದಾಹರಣೆಗೆ ಪುರಂದರದಾಸರ, " ಭಾಗ್ಯದ ಲಕ್ಷ್ಮೀ ಬಾರಮ್ಮಾ" ಎಂಬಂತಹ ಕೀರ್ತನೆಗಳನ್ನು ವೀಕ್ಷಿಸಿದರೆ ಮೇಲಿನ ಹೇಳಿಕೆಯು ಸರಿಯೆನಿಸುತ್ತದೆ. ಅದರಂತೆ ಇತರ ದಾಸರ ಕೀರ್ತನೆಗಳನ್ನೆಲ್ಲಾ ನೋಡಬಹುದು. "ಕನ್ನಡಿಯೊಳಗಿನ ಗಂಟು ಕಂಡು ಕಳ್ಳ ಚನ್ನವಿಕ್ಕಲು ಅವನ ವಶವಹುದೇ" ಎಂಬಲ್ಲಿ ಸುಂದರ ಕಲ್ಪನೆಯನ್ನು ಕಾಣುತ್ತೇವೆ. ಕೆಲವು ಕೀರ್ತನೆಗಳು ಒಗಟನಂತೆಯೂ ಇವೆ. ಮೂರು, ಐದು, ಏಳು ಇತ್ಯಾದಿ ನುಡಿಗಳನ್ನು ಹೊಂದಿದ ಕೀರ್ತನೆಗಳು ಚಿಕ್ಕ ಚಿಕ್ಕ ವಿಶ್ವಕೋಶದಂತಿವೆ. ಶ್ಲೇಷಾರ್ಥವುಳ್ಳ ಕೀರ್ತನೆಗಳೂ ಅನೇಕ ಇವೆ. ಇವು ಆಬಾಲವೃದ್ಧರೆಲ್ಲರಿಗೂ ಅವರದೇ ಆದ ತಿಳಿವಳಿಕೆಯ ಮಟ್ಟಕ್ಕನುಸಾರವಾಗಿ ಅರ್ಥವಾಗುತ್ತವೆ. ರಸದ ದೃಷ್ಟಿಯಿಂದ ಹರಿದಾಸ ಕೀರ್ತನೆಗಳಲ್ಲಿ ಭಕ್ತಿರಸಕ್ಕೆ ಪ್ರಥಮಸ್ಥಾನ. ಕ್ವಚಿತ್ತಾಗಿ ಭೀಭತ್ಸ, ವೀರರಸಾದಿಗಳು ಬಳಸಲ್ಪಟ್ಟಿವೆ. ಛಂದಸ್ಸಿನ ದೃಷ್ಟಿಯಿಂದ ಪದ, ಸುಳಾದಿ, ಉಗಾಭೋಗ, ತತ್ವಸುವ್ವಾಲಿ, ಸೀಸಪದ್ಯ, ದ್ವಿಪದಿ, ಷಟ್ಪದಿ, ರಗಳೆ, ಯಾಲಪದ್ಯ, ಸಾಂಗತ್ಯ ಮೊದಲಾದ ಛಂದೋರೂಪಗಳನ್ನು ಕಾವ್ಯದಲ್ಲಿ ಬಳಸಿದ್ದಾರೆ. ಕೆಲವರು ಸುಲಭವಾದ ಕನ್ನಡ ಛಂದಸ್ಸಿನಲ್ಲಿಯೇ ಉದ್ಗ್ರಂಥಗಳನ್ನು ರಚಿಸಿದ್ದಾರೆ. (ಉದಾ : ಹರಿಕಥಾಮೃತಸಾರ, ಮೋಹನತರಂಗಿಣಿ ಇ.)

ಕೆಲವು ಕೀರ್ತನೆಗಳು ಸಂಸ್ಕೃತ ಸುಭಾಷಿತಗಳ ಪಡಿನೆಳಲು ಎನಿಸಿದರೂ ಅವುಗಳಲ್ಲಿಯ ಭಾಷಾಚಾತುರ್ಯ, ಕಲ್ಪನಾವಿಲಾಸ, ದೃಷ್ಟಾಂತದ ಸೊಗಸು, ದೇಸೀ ಬಳಕೆ ಮೆಚ್ಚತಕ್ಕವುಗಳಾಗಿವೆ. ಅಂತೆಯೇ ಪಂಪ, ರನ್ನ, ಕುಮಾರವ್ಯಾಸರುಗಳ ಪರಿಚಯದ ಗಂಧವೂ ಇರದ ಕನ್ನಡಿಗನು ಸಹ, ಇಂದಿಗೂ ಸಲೀಸಾಗಿ ದಾಸರ ಕೀರ್ತನೆಗಳನ್ನು ಗುನುಗುನಿಸುತ್ತಾನೆ.

ಮತಬೋಧನೆಯ ದೃಷ್ಟಿಯಿಂದ ವಿಚಾರಿಸಲು ಹರಿದಾಸರ ಕೀರ್ತನೆಗಳಲ್ಲಿ ಸಾಮಾನ್ಯವಾಗಿ ಮಧ್ವಮತ ತತ್ವಗಳು ಅಳವಟ್ಟಿರುವುದು ನಿಜ. ಆದರೆ ಕೇವಲ ಮಧ್ವಮತಪ್ರಸಾರಕ್ಕಾಗಿಯೇ ಬರೆದವುಗಳೆಂದಲ್ಲ. ಈ ಮಾತನ್ನು ಲಕ್ಷದಲ್ಲಿಡತಕ್ಕದ್ದು. ಮಧ್ವಮತ ತತ್ವಗಳನ್ನು ಹೊಂದಿವೆಯೆಂದ ಮಾತ್ರಕ್ಕೆ ಮಧ್ವಮತ ಪ್ರಸಾರವೆಂದು ತಿಳಿಯುವುದು ಉಚಿತವೆನಿಸಲಾರದು. ಒಟ್ಟಿನಲ್ಲಿ ವಿಠ್ಠಲನನ್ನೋ, ಶ್ರೀಹರಿಯನ್ನೋ ಆರಾಧ್ಯದೈವತವನ್ನಾಗಿಟ್ಟುಕೊಂಡು ಶಿವಾದಿ ಎಲ್ಲ ದೈವತಗಳನ್ನು ಕುರಿತು ದಾಸರು ಕೀರ್ತನೆಗಳನ್ನು ರಚಿಸಿದ್ದುಂಟು. ಶರಣರ ವಚನಗಳು ಮಾತನಾಡಿದ ಹಾಗೆ ಇದ್ದರೆ, ದಾಸರ ಕೀರ್ತನೆಗಳು ಹಾಡಿದ ಹಾಗಿವೆಯೆಂದು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಯಾವುದೇ ಮತವಿರಲಿ, ವೈಯಕ್ತಿಕ ಚಾರಿತ್ರ್ಯ (ಶೀಲ) ಮಹತ್ವದ್ದೆಂಬುದನ್ನು ದಾಸರು ಸಾರಿದ್ದಾರೆ.

ಹರಿದಾಸರ ನೀತಿಬೋಧೆ ಅಗಾಧವಾದದ್ದಾಗಿದೆ. ಭಕ್ತಿಯಲ್ಲಿ ನವವಿಧ ಭಕ್ತಿಯ ಮಹಿಮೆಯನ್ನು ಸಾರಿದ ದಾಸರು ಆದರ್ಶ ನೀತಿಬೋಧಕರಾಗಿದ್ದಾರೆ. ತಮ್ಮ ಜೀವಿತದ ಕಾಲದಲ್ಲಿ ಸಮಾಜದಲ್ಲಿ ನಡೆದ ಅನ್ಯಾಯ, ಅನೀತಿಗಳನ್ನು ಬಲವಾಗಿ ಖಂಡಿಸಿದ್ದಾರೆ. 'ಸ್ಥಿರವಲ್ಲದ ಈ ಕಾಯವನ್ನು ನಂಬಿ ಕೆಡಲು ಬೇಡ. ಮಾನವ ಜನ್ಮವು ದೊಡ್ಡದು ಇದನ್ನು ಹಾನಿಮಾಡಿಕೊಳ್ಳಲು ಬೇಡಿ' ಎಂದು ಎಚ್ಚರಿಕೆಯಿತ್ತಿದ್ದಾರೆ. ಹರಿಸೇವೆಗಾಗಿ ಈ ಜನ್ಮವನ್ನು ಮುಡಿಪಾಗಿಟ್ಟು ಹರಿಪದ ಸೇರಬೇಕೆಂಬುದೇ ದಾಸವರೇಣ್ಯರ ಬಲವಾದ ಬಯಕೆ. ದಂಡಿಗೆ, ಬೆತ್ತಗಳನ್ನು ಧರಿಸಿದ ದಾಸರು ವೈರಾಗ್ಯ ಜೀವಿಗಳು. ಗೋಪಾಳಬುಟ್ಟಿಯು ನಿರಭಿಮಾನದ ಸಂಕೇತ. ತುಲಸೀ ಮಾಲಿ ಹರಿಯ ಸಾನ್ನಿಧ್ಯವನ್ನು ಪಡೆಯಲು ಪರಮ ಸೋಪಾನ. ಆದ್ದರಿಂದ ದಾಸರು ಆಡಂಬರದ ಕಪಟ ಭಿಕ್ಷುಗಳಲ್ಲ, ತಿರಿದುಂಡರೂ ಸಮಾಧಾನಿಗಳು; ತಿರುಕ-

ರಂತಿದ್ದರೂ ರಾಜಭೋಗಿಗಳು; ಎಂಥ ವಿಪತ್ತು ಒದಗಿದರೂ "ಬಂದದೆಲ್ಲಾ ಬರಲಿ, ಗೋವಿಂದನ ದಯ ನಮಗಿರಲಿ" ಎಂಬ ಸಂಯಮಶೀಲರು. ಪರಮಪುರುಷರು.

ಸಂಸಾರ ಕೂಪದಲ್ಲಿ ಬಿದ್ದು ತೊಳಲುತ್ತಿರುವವರನ್ನು ಉದ್ದೇಶಿಸಿ ಎಲ್ಲಾ ದಾಸರು ಮಿತ್ರಸಮ್ಮಿತ ಉಪದೇಶ ಮಾಡಿದ್ದಾರೆ. ಕನಿಕರದಿಂದ ಮರುಗಿದ್ದಾರೆ. ಈ ಹೇಸಿಯಾದ ಸಂಸಾರದಿಂದ ಓಡಿಹೋಗು, ಸನ್ಯಾಸಿಯಾಗಿ ಕಠೋರ ತಪವನ್ನಾಚರಿಸು ಎಂದು ಯಾವ ದಾಸರೂ ಹೇಳಿಲ್ಲ. ನಿರಾಶಾವಾದವನ್ನು ಸರ್ವಥಾ ಬೋಧಿಸಿಲ್ಲ. ಅದಕ್ಕೆ ಬದಲಾಗಿ "ಈಸಬೇಕು ಇದ್ದು ಜಯಿಸಬೇಕು" "ಮಾನವ ಜನ್ಮ ದೊಡ್ಡದು ಇದ ಹಾನಿಮಾಡಲು ಬೇಡಿ, ಹುಚ್ಚಪ್ಪಗಳಿರಾ" ಎಂಬ ಹಿತವಾದ ಆಶಾದಾಯಕ ನುಡಿಗಳನ್ನಾಡಿದ್ದಾರೆ. ಸತ್ಯ, ಸದ್ವರ್ತನೆ, ಸಚ್ಚಾರಿತ್ರ್ಯ, ನಿರಹಂಕಾರ, ನಿರಾಡಂಬರ ಜೀವನ ಮುಂತಾದ ಸದ್ಗುಣಗಳೇ ನಮ್ಮ ಜೀವನಕ್ಕೆ ಬೆಳಕು ಬೀರಬಲ್ಲ ಸುಲಭ ಸಾಧನಗಳು ಎಂದು ಸಾರಿದ್ದಾರೆ. ಜೀವನಕ್ಕೆ ಒಂದು ಅರ್ಥವನ್ನು ತೋರಿ, ಸಾರ್ಥಕ ಜೀವನ ಬಾಳಲು ಸಂಸಾರಿಕರನ್ನು ಹುರಿದುಂಬಿಸಿದ್ದಾರೆ.

ಮಾನವನು ಸಮಾಜ ಜೀವಿ. ಆತನು ಇತರರೊಡನೆ ಹೇಗೆ ಸಹಕಾರದಿಂದ ಬಾಳಬೇಕು, ಬದುಕಬೇಕೆಂಬುದನ್ನು ದಾಸರು ಪುನಃ ಪುನಃ ನುಡಿದಿದ್ದಾರೆ. ಅನುಭಾವಿಗಳಾದ ದಾಸರ ಕೀರ್ತನೆಗಳು ನೀತಿಯ ನೆಲೆಗಟ್ಟಿನ ಮೇಲೆ ನಿಂತಿವೆ. ಸುಲಲಿತವಾದ ಭಾಷೆಯನ್ನು ಹೊಂದಿವೆ. ತಂದೆಯ ಸ್ಥಾನದಲ್ಲಿದ್ದುಕೊಂಡು, ತಾಯಿಯ ಸ್ಥಾನದಲ್ಲಿದ್ದುಕೊಂಡು ಮಕ್ಕಳೊಂದಿಗೆ ಯಾವ ರೀತಿ ವರ್ತಿಸಬೇಕೆಂಬುದನ್ನೂ, ಜನ್ಮವಿತ್ತ ತಂದೆ–ತಾಯಿಗಳಿಗೆ ಮಕ್ಕಳು ಸಲ್ಲಿಸಬೇಕಾದ ಪ್ರೀತಿ, ಗೌರವಗಳನ್ನು ಕುರಿತೂ ದಾಸರು ಮಾರ್ಮಿಕವಾಗಿ ನುಡಿದಿದ್ದಾರೆ.

ಸ್ತ್ರೀ ಜೀವನವನ್ನು ದಾಸರಷ್ಟು ಸೂಕ್ಷ್ಮವಾಗಿ ವಿಶ್ಲೇಷಿಸಿದವರು ಮತ್ತಾರೂ ಇಲ್ಲವೆಂದು ದೃಢವಾಗಿ ಹೇಳಬಹುದು. ತಾಯಿಯಾಗಿ, ಮಡದಿಯಾಗಿ, ಸೊಸೆಯಾಗಿ, ಮಗಳಾಗಿ, ಅಕ್ಕ–ತಂಗಿಯಾಗಿ, ಈ ಎಲ್ಲ ಪಾತ್ರವನ್ನು ಅವಳು ವಹಿಸುವ ಹೊಣೆಗಾರಳಾದ್ದರಿಂದ ಅವಳ ಕರ್ತವ್ಯ ನಿರ್ವ-

ಹಣೆಯನ್ನು ಕುರಿತು ದಾಸರು ಹೃದ್ಯವಾಗಿ ಉಪದೇಶಗೈದಿದ್ದಾರೆ. ಈಗಿನಂತೆ ಅಂದಿನ ಸಮಾಜವೂ ಅನೇಕ ದೋಷಗಳನ್ನು ಹೊಂದಿರಬೇಕು. ಧರ್ಮದ ಹೆಸರಿನಲ್ಲಿ ಭ್ರಷ್ಟಾಚಾರವನ್ನೆಸಗುವ ಧರ್ಮ ಗುರುಗಳೂ, ಕೇವಲ ಬೆಳ್ಳಿ-ಬಂಗಾರದ ಪ್ರತಿಮೆಗಳನ್ನು ಪೂಜಿಸುವಂಥ ಡಾಂಭಿಕರೂ ಇದ್ದಿರ ಬೇಕು. ಮಡಿಯ ಹೆಸರಿನಲ್ಲಿ ಪ್ರತಿಷ್ಠೆಯನ್ನು ಸ್ಥಾಪಿಸಿಕೊಂಡ ಆಚಾರವಂತರೂ ಇರಬೇಕು. ಇವರನ್ನೆಲ್ಲಾ ಉದ್ದೇಶಿಸಿ ದಾಸರು ಇವೆಲ್ಲಾ ಉದರ ವೈರಾಗ್ಯವೆಂದು ಖಂಡಿಸಿದ್ದಾರೆ. ಅದನ್ನು ತೊರೆಯಲು ಸಲಹೆ ಮಾಡಿದ್ದಾರೆ.

ಸಮಾಜೋದ್ಧಾರದ ಕಾರ್ಯದಲ್ಲಿ ನಿರತನಾದವನಿಗೆ ಅನೇಕ ಎಡರು ತೊಡರುಗಳು, ಸಮಸ್ಯೆಗಳು ಎದುರಾಗುವದು ಸಹಜ. ಅದರಂತೆ ಹರಿದಾಸರನ್ನೂ ಅನೇಕರು ನಿಂದಿಸಿ ನುಡಿದಿರಬೇಕು. ಈ ಮಾತು ದಾಸರ ಕೆಲವು ಕೀರ್ತನೆಗಳಿಂದ ವಿದಿತವಾಗುತ್ತದೆ. ಆದರೂ ಆತ್ಮೋದ್ಧಾರದೊಂದಿಗೆ, ಜನಸೇವೆಗಾಗಿ ಬದ್ಧಕಂಕಣರಾದ ಹರಿದಾಸರು "ಸಕಲವೆಲ್ಲವೂ ಹರಿಸೇವೆ" ಎಂದು ಧೈರ್ಯದಿಂದ ಎಲ್ಲವನ್ನೂ ಸಹಿಸಿದರು.

'ನಾನು ಮೇಲು-ನೀನು ಕೀಳು' ಎಂಬ ಸಂಘರ್ಷದಿಂದ ಕೂಡಿದ ಅಂದಿನ ಸಮಾಜದ ಜನರಿಗೆ "ಕುಲ ಕುಲಕುಲವೆಂದು ಬಡಿದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ?" ಎಂದು ಪ್ರಶ್ನಿಸಿದ್ದಾರೆ. ರಾಮಾಯಣ, ಮಹಾಭಾರತಗಳಿಂದಲೋ ಅಥವಾ ಪುರಾಣ-ಪುಣ್ಯಕತೆಗಳಿಂದಲೋ ಪರಿಣಾಮಕರವಾದ ಉದಾಹರಣೆಗಳನ್ನೆತ್ತಿಕೊಂಡು, ದುರ್ಮಾರ್ಗಿಯಾದವನಿಗೆ ಒದಗುವ ದುರ್ಗತಿಯನ್ನು ಕುರಿತು ಒಂದೆಡೆ ಹಾಡಿದರೆ, ಸನ್ಮಾರ್ಗದಲ್ಲಿ ನಡೆದವನ ಸುಖಮಯ ಜೀವನವನ್ನು ಕುರಿತು ಮತ್ತೊಂದೆಡೆಗೆ ಹಾಡಿದ್ದಾರೆ. ಭುಜಬಲ, ಧನಬಲ, ಸೈನ್ಯ ಬಲವಿದ್ದ ದುರ್ಯೋಧನ, ರಾವಣರು ದುರ್ಮಾರ್ಗದಿಂದ ಮಣ್ಣುಮುಕ್ಕಿ ಹೋದರೆಂದಾಗ ನಿನ್ನಂಥ ಬಡಪಾಯಿಯ ಗತಿಯೇನು ? —ಎಂದಿದ್ದಾರೆ.

ಜನಸಾಮಾನ್ಯನಿಗೆ ಕಬ್ಬಿಣದ ಕಡಲೆಯಾದ ವೇದ, ಶಾಸ್ತ್ರ, ಪುರಾಣಗಳೊಳಗಣ ನೀತಿಸುಧೆಯನ್ನು ದಾಸರ ಕೀರ್ತನೆಗಳು ಸುಲಭವಾಗಿ ಒದಗಿ-

ಸುತ್ತವೆ. ಮಾನವನನ್ನು ದಾನವನನ್ನಾಗಿಸದೇ, ದೈವತ್ವಕ್ಕೇರಿಸುವದೇ ಹರಿದಾಸರ ಕೀರ್ತನೆಗಳ ಉದ್ದೇಶ.

**ಉಪಸಂಹಾರ**

ಕರ್ನಾಟಕದಲ್ಲಿ ನೂರಾರು ಜನ ದಾಸರು ಆಗಿಹೋದರೂ ಅವರಲ್ಲಿ ವಿಶೇಷ ಮಹತ್ವವುಳ್ಳವರು ಕೇವಲ ಹತ್ತು - ಹದಿನೈದು ಜನ ಮಾತ್ರ. ದಾಸಸಾಹಿತ್ಯದ ಅಭ್ಯಾಸ ಮಾಡಬೇಕೆಂಬ ಕುತೂಹಲಿಗಳಾದ ಕನ್ನಡಿಗರಿಗೆ ಈ ಪ್ರಮುಖದಾಸರನ್ನು ಬಿಟ್ಟರೆ ಗತಿಯಿಲ್ಲ. ವಿಶೇಷ ಪ್ರಚಾರದಲ್ಲಿರುವ ವ್ಯಾಸರಾಯರು, ಪುರಂದರರು, ಕನಕದಾಸರು, ವಿಜಯದಾಸರು, ಜಗನ್ನಾಥ ದಾಸರು, ಗೋಪಾಲದಾಸರು, ಮುಂತಾದವರ ಕೃತಿಗಳು ಕನ್ನಡಿಗರ ಮನ ವನ್ನು ಸೂರೆಗೊಂಡಿವೆ. " ಹರಿದಾಸರು " ಎಂಬ ಪದವೇ ಸೂಚಿಸುವಂತೆ ಇಲ್ಲಿ ದಾಸ್ಯಭಾವಕ್ಕೆ ಅಗ್ರಸ್ಥಾನವಿದೆ.

ದಾಸರು ತಮ್ಮ ಕೀರ್ತನೆಗಳನ್ನು ಎಲ್ಲಿಯೂ ಬರೆದಿಡಲಿಲ್ಲ. ಸಂಚಾರೀ ಜೀವನಾನುಭವದ ತಾಣದಲ್ಲಿ ಒಂದೊಂದು ನುಡಿಮುತ್ತು ಚೆಲ್ಲಿದ್ದಾರೆ. ಅವರ ಭಕ್ತರಲ್ಲಿ ಕೆಲವರು ಈ ನುಡಿಮುತ್ತುಗಳನ್ನು ಸಂಗ್ರಹಿಸಿದರು. ಹೀಗಾಗಿ ಲಿಪಿಕಾರರ ಅಲ್ಪಮತಿಯಿಂದಾಗಿಯೋ, ಅರ್ಧಜ್ಞಾನದಿಂದಾ-ಗಿಯೋ, ಮರೆವಿನಿಂದಾಗಿಯೋ ಅಲ್ಲಲ್ಲಿ ಸ್ಖಾಲಿತ್ಯಗಳು ಇನ್ನೂ ಉಳಿದು ಕೊಂಡಿವೆ. ಮತ್ತೆ ಕೆಲವೆಡೆ ಬೇರೆ ಯಾರೋ, ಗೀತೆಗಳನ್ನು ರಚಿಸಿ ದಾಸರ ಹೆಸರಿನಲ್ಲಿ ಸೇರಿಸಿರಲೂಬಹುದು. ದಾಸವರೇಣ್ಯರು ಜನಿಸಿದ ನಾಡಿನಲ್ಲಿಯೇ ಜನಿಸುವ ಭಾಗ್ಯವಂತರಾದ ನಾವೆಲ್ಲಾ ದಾಸರ ಕೀರ್ತನೆಗಳನ್ನು ಆಳವಾಗಿ ಅಭ್ಯಸಿಸಿ ಸ್ಖಾಲಿತ್ಯಗಳನ್ನು ಹೊಡೆದೋಡಿಸಿ ಪರಿಷ್ಕರಿಸಬೇಕು. ಅನುಪ-ಲಬ್ಧವಾಗಿ ಎಲ್ಲಿಯೋ ಗೆದ್ದಲುಗಳಿಗೆ ಆಹಾರವಾಗಿ ನಶಿಸಿ ಹೋಗುತ್ತಿರುವ ದಾಸಸಾಹಿತ್ಯವನ್ನು ಸಂಶೋಧಿಸಬೇಕು. ಹೀಗೆ ಮಾಡಿದರೆ ದಾಸರ ಸೇವೆ ಯನ್ನು ಮಾಡಿದಂತಾಗುತ್ತದೆ. ಮಾತ್ರವಲ್ಲದೇ ಹಾಳಾಗಿ ಹೋಗುವ ಆ ತವನಿಧಿಯನ್ನು ಉಳಿಸಿದಂತೆಯೂ ಆಗುತ್ತದೆ. ಈ ದಿಸೆಯಲ್ಲಿ ಹಿರಿಯ

ಸಾಹಿತಿಗಳಾದ ಡಾ|| ಜಿಟಿಗೇರಿ ಕೃಷ್ಣಶರ್ಮರು ಹಾಗೂ ರಂಗನಾಥ ದಿವಾಕರರು ಮಾರ್ಗ ಹಾಕಿಕೊಟ್ಟಿದ್ದಾರೆ. ಈ ಪೂಜ್ಯರ ಮಾರ್ಗದರ್ಶನದಲ್ಲಿ ಇಂದಿನ ತರುಣ ಜನಾಂಗ ಸಾಗಿದರೆ ಕಾರ್ಯ ಸುಲಭವಾಗುತ್ತದೆ ಅಲ್ಲದೇ ಅನೇಕ ವಿಶ್ವವಿದ್ಯಾಲಯಗಳು, ಶಿಕ್ಷಣ ಸಂಸ್ಥೆಗಳು, ಸಾಹಿತ್ಯಾಭ್ಯಾಸಿಗಳು, ದಾಸಸಾಹಿತ್ಯದ ಸಂಶೋಧನೆ ಮಾಡುತ್ತಿದ್ದಾರೆ. ಇದು ಕನ್ನಡಿಗರಿಗೆ ಹೆಮ್ಮೆಯ ವಿಷಯ.

ಶ್ರೀ ದಾಸಗುರುಭ್ಯೋ ನಮಃ



# ಪ್ರಸನ್ನವೆಂಕಟದಾಸರು

## (ಜೀವನಚರಿತ್ರೆ)

ಪ್ರಮುಖರಾದ ದಾಸಚತುಷ್ಟಯ*ರ ನಂತರ ಅವರ ಪರಂಪರೆಯನ್ನು ಮುಂದುವರಿಸಿಕೊಂಡು ಬಂದವರಲ್ಲಿ ಪ್ರಸನ್ನವೆಂಕಟದಾಸರು ಅಗ್ರಗಣ್ಯರು. ಇವರ ಕೃತಿರಚನೆಗಳ ಮೇಲಿಂದ ಇವರು ಮೇಧಾವಿಗಳೂ, ಪಂಡಿತರೂ, ಜ್ಞಾನಿಗಳೂ ಆಗಿದ್ದರೆಂದು ತಿಳಿದುಬರುತ್ತದೆ. ಆದುದರಿಂದ ಇವರ ಪಾಂಡಿತ್ಯ-ಪ್ರತಿಭೆಗಳಿಗೆ ಆ ಕಾಲದ ಸಾಮಂತರಿಂದಲೂ, ಗೌಡ, ಶಾನುಭೋಗರಿಂದಲೂ ಸಾಕಷ್ಟು ಗೌರವ ಸಂದಿರಬೇಕು. ಇವರಿಗೆ ದೊರೆತ ದಾನದತ್ತಿಗಳಿಂದ ಮೇಲಿನ ಹೇಳಿಕೆ ಸತ್ಯವೆನಿಸುತ್ತದೆ.

ಇಂಥ ಪ್ರಮಾಣಗಳ ಆಧಾರದಿಂದ ಹಾಗೂ ಕೃತಿಗಳ ಮುಖಾಂತರ ಮಾತ್ರವೇ ನಾವು ಪ್ರಸನ್ನವೆಂಕಟದಾಸರ ಜೀವನ ಚರಿತ್ರೆಯನ್ನು ಕುರಿತು ಅರಿಯಬಹುದಾಗಿದೆ. ಈ ಅಲ್ಪಾಧಾರ ಹಾಗು ದಾಸರ ಕೃತಿಗಳ ಮೇಲಿಂದಲೇ ಪ್ರಸನ್ನವೆಂಕಟರ ಜೀವನ ನಮಗೆ ಈ ಪಟ್ಟಿಗೆ ವಿದಿತವಾಗಿದೆ. ಆದರೆ ಇಂಥ ಊಹೆ ಕೇವಲ ಸತ್ಯಕ್ಕೆ ಸಮೀಪವಾದೀತೆ ವಿನಃ ಸಂಪೂರ್ಣ ಸತ್ಯವೆನ್ನಿಸಲಾರದು.

ಪ್ರಸನ್ನವೆಂಕಟದಾಸರು ಹದಿನೇಳನೆಯ ಶತಮಾನದ ಮಧ್ಯದಲ್ಲಿ ಜನಿಸಿದರು. ಇವರ ಹುಟ್ಟೂರು ಬಿಜಾಪುರ ಜಿಲ್ಲೆಯ ಬಾಗಿಲುಕೋಟೆ. ತಂದೆ ಕಾಶ್ಯಪಗೋತ್ರದ ಕುಳಿಂಡಕಿ ನರಸಪ್ಪಯ್ಯನವರು. ಈ ಕಾಲದಲ್ಲಿಯೇ ವಿಜಾಪುರದಲ್ಲಿ ಮುಸಲಮಾನ ಆದಿಲಶಹನು ಆಳುತ್ತಿದ್ದನು.

---

* ೧. ಪುರಂದರದಾಸರು, ೨. ಕನಕದಾಸರು, ೩. ವಿಜಯದಾಸರು, ೪. ಜಗನ್ನಾಥದಾಸರು

ನರಸಪ್ಪನವರು ಜೀವನೋಪಾಯಕ್ಕಾಗಿ ವೈದಿಕ ವೃತ್ತಿಯನ್ನವಲಂಬಿಸಿದ್ದರು. ಇವರು ಗಳಿಸಿದ ಮನೆ ಈಗಲೂ ಬಾಗಿಲುಕೋಟೆಯಲ್ಲಿ ನಮಗೆ ನೋಡಲು ಸಿಗುತ್ತದೆ. ಇವರ ಮನೆತನದ ಹೆಸರು ಕಾಖಂಡಕಿ ಎಂದಿದ್ದುದರಿಂದ ಮೂಲತಃ ಕಾಖಂಡಕಿ ಊರವರೇ ಆಗಿರಬಹುದೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಈ ಹೇಳಿಕೆಗೆ ಭದ್ರವಾದ ಯಾವ ಆಧಾರಗಳೂ ಇಲ್ಲ.

ಪ್ರಸನ್ನವೆಂಕಟದಾಸರು, ಕ್ರಿ.ಶ.ಸುಮಾರು ೧೬೮೦ನೆಯ ಇಸ್ವಿಯಲ್ಲಿ, ತಾಯಿ ಲಕ್ಷ್ಮೀಬಾಯಿಯ ಪುಣ್ಯ ಉದರದಲ್ಲಿ ಜನಿಸಿದರು. ಮಗುವಿಗೆ ವೆಂಕಟೇಶನೆಂದು ನಾಮಕರಣ ಮಾಡಲಾಯಿತು. ವೆಂಕಪ್ಪಯ್ಯನೆಂದೂ ಕರೆಯುತ್ತಿದ್ದರು. ವೆಂಕಟೇಶನ ತಂದೆ-ತಾಯಿಗಳು ಯಾವಾಗ ಮರಣ ಹೊಂದಿದರೆಂಬುದಕ್ಕೆ ಸರಿಯಾದ ಆಧಾರಗಳಿಲ್ಲ. ಆದರೆ ಇವರಿಗೆ ಒಬ್ಬ ಅಣ್ಣನಿದ್ದನೆಂದೂ, ತಂದೆ-ತಾಯಿಗಳು ಗತಿಸಿಹೋದಮೇಲೆ ಅಣ್ಣನೇ ವೆಂಕಟೇಶನ ಸಂರಕ್ಷಣೆಯ ಭಾರ ಹೊತ್ತನೆಂದೂ ಹೇಳಬಹುದು. ಅಣ್ಣನ ಹೆಂಡತಿ ಕ್ರೂರೆಯಾದುದರಿಂದ ಬಾಲಕ ವೆಂಕಟೇಶನ ಶಿಕ್ಷಣಕ್ಕೆ ತಿಲಾಂಜಲಿಯಾಯಿತು. ಮತ್ತು ಆಳಿನಂತೆ ಮನೆಯಲ್ಲಿಯ ದನಗಳನ್ನು ಮೇಯಿಸಲು ಹೋಗುವ ಕಾರ್ಯ ವೆಂಕಟೇಶನದಾಯಿತು. ಅಣ್ಣನು ಮನೆಯಲ್ಲಿ ಪಠಿಸುತ್ತಿದ್ದ ವೆಂಕಟೇಶಮಹಾತ್ಮೆ ಹಾಗೂ ವೆಂಕಟೇಶಸ್ತೋತ್ರಗಳನ್ನು ನಿರರ್ಗಳವಾಗಿ ಈ ದನದಾಹಿ ಹೇಳುತ್ತಿದ್ದನು. ವೃತ್ತಿಯಲ್ಲಿ ಏನುಮಾಡಿದರೇನು, ಸಂಸ್ಕಾರವೆಂಬುದೆಂದಾದರೂ ಸುಳ್ಳಾಗುವುದೇ ? ಹೀಗೆ ವೆಂಕಟೇಶನು ತಿರುಪತಿಗಿರಿವಾಸ ಶ್ರೀನಿವಾಸನ ಪರಮಭಕ್ತನಾದನು. ಅನನ್ಯ ಭಕ್ತಿಯಿಂದ ಆ ದೇವರಿಗೆ ಮೊರೆಹೋಗುತ್ತಿದ್ದನು. ಈತನ ಪ್ರಾರ್ಥನೆಯು ಆ ಸ್ವಾಮಿಗೆ ತಲುಪಿತೋ ಎಂಬಂತೆ ಮುಂದೆ ಒಂದು ಘಟನೆಯೂ ಜರುಗಿತು. ಈ ಘಟನೆ ಆತನನ್ನು ದಿವ್ಯ ಆನಂದದೆಡೆಗೆ ಸಾಗಿಸಿತು. ಆ ಘಟನೆ ಏನೆಂದರೆ–

ಮತ್ಸರದ ವಿಷದಿಂದ ತುಂಬಿದ ಅತ್ತಿಗೆಗೆ, ಅತಿಯಾಗಿ ಬಾಯಾರಿ ಗಂಟಲು ಸೆಳೆದ ವೆಂಕಟೇಶ ಕುಡಿಯಲು ತುಸು ಮಜ್ಜಿಗೆ ಕೇಳಿದ. ನಿಷ್ಕರುಣೆಯಾದ ಅವಳು ಮನಬಂದಂತೆ ಹೀನ ನುಡಿಗಳನ್ನು ಆಡಿದಳು. "ಈ ಮನೆಯಲ್ಲಿದ್ದುಕೊಂಡು ಒಂದು ಮುಕ್ಕು ಮಜ್ಜಿಗೆಗೂ ಪರಾಧೀನತೆಯೇ

ಳೇ, ಇಷ್ಟು ಹೀನಾಯಮಾನವಾಗಿ ಬಾಳುವುದಕ್ಕಿಂತ ಎಲ್ಲಿಯಾದರೂ ತಿರಿದುಂಬುವುದೇ ಲೇಸೆಂ"ದು ಬಗೆದು ಅತ್ತಿಗೆಗೆ ಹೇಳಿ, ವೆಂಕಟೇಶನು ತಿರುಪತಿಯತ್ತ ಪ್ರಯಾಣಬೆಳೆಸಿದ.

ಮಾರ್ಗದಲ್ಲಿ ಎದುರಾಗುವ ಎಲ್ಲ ಸುಖದುಃಖಗಳಿಗೂ ನೀನೇ ಹೊಣೆ ಎಂದು ದೇವರ ಮೇಲೆ ಭಾರಹಾಕಿ ಆತನನ್ನೇ ಹಲವು ವಿಧಗಳಲ್ಲಿ ಅರ್ಚಿಸುತ್ತಾ, ಸುತ್ತಿಸುತ್ತಾ ತಿರುಪತಿಯನ್ನು ತಲುಪಿದನು. ಗಿರಿಯೊಡೆಯನ ದರುಶನವಾಗುತ್ತಲೇ ಆನಂದ ತುಂದಿಲನಾಗಿ ಭಕ್ತಿಕಂಪಿತನಾದನು. ಅನನ್ಯ ಪರಿಯಾಗಿ ಸರ್ವಾರ್ಪಣಭಾವದಿಂದ ದೇವರಿಗೆ ಮೊರೆಯಿಟ್ಟನು. ಇದೇ ಸಮಯಕ್ಕೆ ಹರಿದಾಸರ ತಂಡವೊಂದು ಕೀರ್ತನೆಗಳನ್ನು ಹಾಡುತ್ತ ತಿರುಪತಿಯ ದೇವಸ್ಥಾನಕ್ಕೆ ಆಗಮಿಸಿತು. ತಾಳ, ತಂಬೂರಿ, ದಂಡಿಗೆ, ಚೆತ್ತಗಳನ್ನು ಹಿಡಿದ ಹರಿದಾಸರು ಅನೇಕ ರೀತಿಯಲ್ಲಿ ಸ್ತುತಿಗೀತೆಗಳನ್ನು, ಮಹಿಮಾ ಪದ್ಯಗಳನ್ನು ಹಾಡುತ್ತಾ ಕುಣಿಯುತ್ತಿದ್ದರು. ಆ ತಂಡವನ್ನು ನೋಡಿ ವೆಂಕಟೇಶನಿಗೂ ಅವರಂತೆಯೆ ಆಗುವ ಬಯಕೆಯಾಯಿತು. ಕೂಡಲೇ ಸ್ವಾಮಿಪುಷ್ಕರಣಿತೀರ್ಥದಲ್ಲಿ ಮಿಂದು ಮಡಿಯಾಗಿ ಕೀರ್ತನೆಗಳನ್ನು ಹಾಡುತ್ತಾ ನಲಿದಾಡಿದನು.

ಈತನ ಅಚಲವಾದ ಭಕ್ತಿಗೆ ಮೆಚ್ಚಿ ಸ್ವಾಮಿಯು ಪ್ರತ್ಯಕ್ಷನಾದನು ಹಾಗೂ ವೆಂಕಟೇಶನ ಪವಿತ್ರವಾದ ನಾಲಿಗೆಯನ್ನು ಹೊರಗೆಳೆದು ತನ್ನ ಕರಪದ್ಮದಿಂದ ಬೀಜಾಕ್ಷರಗಳಾ " ವೆಂಕಟೇಶ " ಎಂಬ ಅಕ್ಷರಗಳನ್ನು ಬರೆದನು. ಈಗ ವೆಂಕಟೇಶ ಮಹಾಜ್ಞಾನಿಯಾದನು. ಜನ್ಮಾಂತರಜ್ಞಾನ ಪ್ರಾಪ್ತವಾಯಿತು. ಈ ಸುಜ್ಞಾನಪ್ರಾಪ್ತಿಯಿಂದ ವೆಂಕಟೇಶನು ಸ್ಫೂರ್ತಿಗೊಂಡು ಪದ್ಯರಚನೆಗೆ ತೊಡಗಿದನು. ಶ್ರೀಹರಿಯ ಸ್ತುತಿಯುಳ್ಳ, ಆತನ ಮಹಿಮೆಯನ್ನೆತ್ತಿ ಸಾರುವ ಈ ಪದ್ಯವೇ ಮೊದಲನೆಯದೆಂದು ತೋರುತ್ತದೆ:

ತಪ್ಪು ನೋಡದೆ ಬಂದೆಯಾ ನನ್ನ ತಂದೆಯಾ |
ಅಪ್ಪ ತಿರುವೆಂಗಳೇಶನೆ ನಿರ್ದೋಷನೆ ||

ತಿರುಪತಿ ಗಿರಿಯೊಡೆಯನಾದ ಶ್ರೀನಿವಾಸನು ಸಾಕ್ಷಾತ್ ದರ್ಶನವಿತ್ತು ಮಹಾಜ್ಞಾನವನ್ನು ನೀಡಿದ್ದರಿಂದ "ಪ್ರಸನ್ನವೆಂಕಟ" ಎಂಬ ಅಂಕಿತವು

ಕೀರ್ತನೆಗಳಲ್ಲಿ ಕಂಡುಬರುತ್ತದೆ. ಮುಂದೆ ಕೆಲಕಾಲ ಪ್ರಸನ್ನವೆಂಕಟ ದಾಸರು ಗಿರಿಯಲ್ಲಿಯೇ ಇದ್ದು ಶ್ರೀನಿವಾಸನ ಸೇವೆಯಲ್ಲಿ ಕಾಲಕಳಿದರು. ಇವರ ಏಳ್ಗೆಯನ್ನು ಕಂಡು ಸಹಿಸದ ಜನರು ಅಲ್ಲಿಯೂ ತೊಂದರೆ ಕೊಟ್ಟರೆಂದು ತೋರುತ್ತದೆ. ತಾವು ವಿದ್ಯೆಯನ್ನು ಸಂಪಾದಿಸಲಿಲ್ಲವಲ್ಲಾ ಎಂಬ ಕೊರಗೂ ದಾಸರ ಕೆಲವು ಕೀರ್ತನೆಗಳಲ್ಲಿ ವ್ಯಕ್ತವಾಗಿದೆ. ವಿದ್ಯೆಯನ್ನು ಪಡೆಯಬೇಕೆಂಬ ನಿಶ್ಚಯವುಳ್ಳವರಾಗಿ ಪುನಃ ತಮ್ಮ ಪ್ರಾಂತಕ್ಕೆ ಬಂದರು. ವಿದ್ಯಾಗುರುವಿಗಾಗಿ ಅರಸತೊಡಗಿದರು. ಪ್ರಖ್ಯಾತ ಪಂಡಿತರಾದ ಮುದ್ಗಲ ಜನಾರ್ದನಾಚಾರ್ಯರನ್ನು ಕಂಡು ಭಯಭಕ್ತಿಯಿಂದ ವಂದಿಸಿ, ಅವರ ಶಿಷ್ಯತ್ವವನ್ನು ವಹಿಸಿ, ಐದಾರು ವರ್ಷ ಮುದ್ಗಲ ಜನಾರ್ದನಾಚಾರ್ಯರಲ್ಲಿ ಸಂಸ್ಕೃತ ಅಧ್ಯಯನಮಾಡಿದರು. ಆದುದರಿಂದಲೇ ಗುರುಗಳನ್ನು ಒಂದು ಗೀತದಲ್ಲಿ ಹೀಗೆಕೊಂಡಾಡಿದ್ದಾರೆ :

“ ಭಜಿಸಿ ಬದುಕೆಲೊ ಮುದ್ಗಲಾಚಾರ್ಯರನು ”

ಮುಂದೆ ಇವರು, ದ್ವೈತಮತವನ್ನು ಕುರಿತಾದ ಅನೇಕ ಕೀರ್ತನೆಗಳನ್ನು ರಚಿಸಿದರು. ಸುಳಾದಿಗಳನ್ನು, ಭಾರತ, ಭಾಗವತ, ರಾಮಾಯಣಾದಿ ವಿವಿಧ ಸದ್ಗ್ರಂಥಗತ ಅನೇಕ ಕಥಾಸನ್ನಿವೇಶಗಳನ್ನು ಕೀರ್ತನೆಯ ರೂಪದಲ್ಲಿ ಹೊರತಂದರು. ಅನುಭವ ಗೀತೆಗಳನ್ನು ರಚಿಸಿದರು. ತದನಂತರ ಪ್ರಸನ್ನವೆಂಕಟದಾಸರು ತಿರುಪತೀಶನ ಅನುಗ್ರಹದ ಅಭಯರಕ್ಷೆಯನ್ನು ಹೊತ್ತು ನಾನಾ ಕ್ಷೇತ್ರಗಳನ್ನು ಸಂಚರಿಸುತ್ತ ಪರಮಾತ್ಮನ ದರ್ಶನವನ್ನು ವಿವಿಧರೂಪಗಳಲ್ಲಿ ಕಾಣುತ್ತ ಕೊಂಡಾಡುತ್ತ ಸಾಗಿದರು.

ಸಂಚರಿಸುತ್ತ, ಸಂಚರಿಸುತ್ತ ಪ್ರಸನ್ನವೆಂಕಟದಾಸರು ತಮ್ಮ ಜನ್ಮಸ್ಥಳವಾದ ಬಾಗಲಕೋಟೆಗೆ ಬಂದರು. ಯಾವ ಅತ್ತಿಗೆಯಿಂದ ಹೀನಾಯ ನುಡಿಗಳನ್ನಾಡಿಸಿಕೊಂಡಿದ್ದರೋ ಆ ಅತ್ತಿಗೆ ಹಾಗೂ ಅಣ್ಣನನ್ನು ಭೆಟ್ಟಿಯಾದರು. ಸತ್ಪುರುಷರಿಗೆ ಬಾಧೆಯನ್ನಿತ್ತರೆ ಕೇಡುತಪ್ಪದೆಂಬಂತೆ ಪ್ರಸನ್ನವೆಂಕಟರಿಗೆ ತೊಂದರೆಯನ್ನಿತ್ತ ಅತ್ತಿಗೆ–ಅಣ್ಣನ ಸಂಸಾರವು ಈಗ ಸಂಪೂರ್ಣವಾಗಿ ಅಧೋಗತಿಗಿಳಿದಿತ್ತು. ಪಶ್ಚಾತ್ತಾಪದಿಂದ ಬೆಂದ ಅತ್ತಿಗೆ ಕ್ಷಮೆಯಾಚಿಸಿದಳು. ನಿನ್ನನ್ನು ಪಂಕ್ತಿಯಿಂದ ಗೋಳಾಡಿಸಿದೆವು. ಅದಕ್ಕೇ

ನಮಗೆ ಈ ಗತಿ ಒದಗಿದೆ. ಆದ್ದರಿಂದ ವೆಂಕಟೇಶಾ ನಮ್ಮನ್ನುದ್ಧರಿಸು-ಎಂದು ಮೊರೆಯಿಟ್ಟಳು. ಅತ್ತಿಗೆಯ ವ್ಯಥೆಯಿಂದ ಕನಿಕರತಾಳಿ ಪ್ರಸನ್ನವೆಂಕಟ ದಾಸರು ಹರಸಿದರು.

ಆದರೆ ಪ್ರಸನ್ನವೆಂಕಟದಾಸರ ಮದುವೆಯಾವಾಗ ಆಯಿತು, ಅವರ ಪತ್ನಿಯ ಹೆಸರೇನು? ಎಂಬ ವಿಷಯವನ್ನು ಕುರಿತು ಖಚಿತವಾದ ಆಧಾರಗಳು ದೊರೆಯುವದಿಲ್ಲ. ಅವರ ಪೀಳಿಗೆಯವರ ಮೇಲಿಂದ ಪ್ರಸನವೆಂಕಟದಾಸರಿಗೆ ವೆಂಕಟಕೃಷ್ಣಾಚಾರ್ಯ ಎಂಬ ಮಗನಿದ್ದನೆಂದು ಗೊತ್ತಾಗುತ್ತದೆ.

ಪ್ರಸನ್ನವೆಂಕಟದಾಸರು ಕೆಲಕಾಲ ಬಾಗಿಲುಕೋಟೆಯಲ್ಲಿಯೇ ವಾಸಿಸಿದ್ದರು. ಅವರ ಶಿಷ್ಯಬಳಗ ಬೆಳೆಯಿತು. ಅವರ ಪಾಂಡಿತ್ಯದ ಕೀರ್ತಿ ಎಲ್ಲೆಡೆಗೂ ಹಬ್ಬಿತು. ಅನೇಕ ಜನ ಸುಭೇದಾರರು, ಸಾಮಂತರು, ಸರದಾರರು ಅವರನ್ನು ಆದರಿಸಿ, ಗೌರವಿಸಿ ಸನ್ಮಾನಿಸಿದರು. ಭೂಮಿಯನ್ನು ದತ್ತಿಯಾಗಿ ಕೊಟ್ಟರು. ಮನೆಗಳನ್ನಿತ್ತರು. ವರ್ಷಾಶನ ಹಾಕಿ ಕೊಟ್ಟರು. ಈ ವಿಷಯವೆಲ್ಲಾ ಕೆಲವು ಕಾಗದ-ಪತ್ರಗಳಿಂದ ತಿಳಿಯುತ್ತದೆ. ಕ್ರೂರ ಮೃಗವಾದ ಹುಲಿಯನ್ನು ದಾಸರು ಆಡಿಸುತ್ತಿದ್ದರೆಂಬ ಹೇಳಿಕೆಯೂ ಉಂಟು. ಸಾಕು ಪ್ರಾಣಿಯಂತೆ ಇವರ ಪ್ರವಾಸದಲ್ಲಿ ಹುಲಿಯು ಹಿಂಬಾಲಿಸುತ್ತಿತ್ತಂತೆ. ಇದೂ ಒಂದು ಪವಾಡವೆಂದು ಹೇಳಬಹುದು. ಪ್ರಸನ್ನವೆಂಕಟದಾಸರು ಪುರಂದರರಿಂದ ಪ್ರೇರಿತರಾಗಿದ್ದರು. ಪುರಂದರರನ್ನು ಸ್ತುತಿಸುವ ಅನೇಕ ಕೀರ್ತನೆಯನ್ನು ರಚಿಸಿದ್ದಾರೆ.

ವಿವಿಧ ದೇಶಗಳ ಸಂಚಾರವು ದೇವರ ವಿವಿಧರೂಪಗಳನ್ನು ಅರಿಯಲು ದಾಸರಿಗೆ ಸಹಾಯಕವಾಯಿತು. ಹಳ್ಳಿಹಳ್ಳಿಯನ್ನೂ ಸಂಚರಿಸಿ ಜನರಿಗೆ ಹರಿನಾಮದ ಮಹಿಮೆಯನ್ನು ತಿಳಿಸಿದರು. ಲೌಕಿಕ ಹಿತದೊಂದಿಗೆ ಆತ್ಮೋನ್ನತಿಯನ್ನು ಸಾಧಿಸಿದರು. ಏಕಾಂತಪೂಜೆಯ ಪ್ರಶಸ್ತವಾದ ಸ್ಥಳ ಹಾಗೂ ದೇವರ ವಿವಿಧ ಪ್ರತಿಮೆಗಳನ್ನು ಹೊಂದಿದ ವೈಭವದ ದೇವರ ಮನೆಯು ಇಂದಿಗೂ ಬಾಗಿಲುಕೋಟೆಯ ಮನೆಯಲ್ಲಿ ಕಂಡುಬರುತ್ತದೆ.

ಹೀಗೆ ಶ್ರೀಹರಿಯ ಸೇವೆಗೆ ಅಖಂಡವಾದ ಜೀವನವನ್ನು ಮುಡಿಪಾಗಿಟ್ಟ ಪ್ರಸನ್ನವೆಂಕಟದಾಸರು ಎಪ್ಪತ್ತೆರಡು ವರ್ಷ ಬಾಳಿ ಶಕೆ ೧೬೭೪

ನೆಯ ಅಂಗಿರಸ ಸಂವತ್ಸರದ ಭಾದ್ರಪದ ಶುದ್ಧ ಏಕಾದಶಿಯ ಮಧ್ಯರಾತ್ರಿಯ ಸಮಯದಲ್ಲಿ ವೈಕುಂಠವಾಸಿಗಳಾದರು. ಅಂತ್ಯಕಾಲಕ್ಕೆ ದಾಸರಿಗೆ ಶ್ರೀಹರಿಯ ದರ್ಶನವಾಯಿತೆಂದು ಒಂದು ಕೀರ್ತನೆಯಿಂದ ಕಂಡುಬರುತ್ತದೆ. ಇವರ ಅಂತ್ಯವು ಜನ್ಮಸ್ಥಳವಾದ ಬಾಗಿಲುಕೋಟೆಯಲ್ಲಾಗಿರದೇ ಅಲ್ಲಿಂದ ಇಪ್ಪತ್ತೆಂಟು ಮೈಲು ಅಂತರದಲ್ಲಿದ್ದ ದಕ್ಷಿಣಕಾಶಿಯೆಂದು ಪ್ರಸಿದ್ಧವಾದ ಬಾದಾಮಿಯಲ್ಲಿ ಆಯಿತೆಂದು ಒಂದು ಹೇಳಿಕೆಯುಂಟು. ಇಂದಿಗೂ "ಶ್ರೀಪ್ರಸನ್ನವೆಂಕಟರ ಕಟ್ಟಿ" ಎಂದು ಅಲ್ಲಿ ಪ್ರಸಿದ್ಧವಿದೆ. ಈ ಕಟ್ಟೆಯನ್ನು ದಾಸವರೇಣ್ಯರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯರು ಕಟ್ಟಿಸಿದರೆಂದು ಐತಿಹ್ಯವಿದೆ.

## ಪ್ರಸನ್ನವೆಂಕಟದಾಸರ ಸಾಹಿತ್ಯ

ಪ್ರಸನ್ನವೆಂಕಟದಾಸರ ಕೀರ್ತನೆಗಳಲ್ಲಿ ಹರಿನಾಮಸ್ಮರಣೆಯ ಕೀರ್ತನೆಗಳು ಪ್ರಮುಖವೆನಿಸಿವೆ. ಈ ಹರಿನಾಮ ಸ್ಮರಣೆಯಿಂದಲೇ ಇಹದಲ್ಲಿ ಸೌಖ್ಯ, ಪರದಲ್ಲಿ ಮುಕ್ತಿ ದೊರೆಯುವವೆಂಬ ಬಲವಾದ ನಂಬಿಕೆ. ಆದುದರಿಂದ ಪ್ರಸನ್ನವೆಂಕಟದಾಸರು ನಾಮಸ್ಮರಣೆಯನ್ನು ಹೀಗೆ ಕೊಂಡಾಡಿದ್ದಾರೆ.

"ಮರೆಯದಿರು ಮನವೆ ಮಾಧವನಾ"
"ರಾಮನೆನ್ನಿ ರಾಮನೆನ್ನಿ । ವ್ಯೋಮಕೇಶಗೆ ದಿವ್ಯನಾಮಾ-
ಮೃತವಿತ್ತ ರಾಮನೆನ್ನಿ ರಾಮನೆನ್ನಿ"

ಮಧ್ವಪರಂಪರೆಯನ್ನು ಕುರಿತಾದ ಗೀತೆಗಳನ್ನೂ ರಚಿಸಿದ್ದಾರೆ. ಹನುಮ, ಭೀಮ, ಮಧ್ವರು ತಮ್ಮ ಬಂಧುಬಾಂಧವರೆಂದು ಮುಕ್ತಕಂಠವಾಗಿ ದಾಸರು ಹಾಡಿದ್ದಾರೆ. ನಿರ್ಮಲಭಕ್ತಿಯೇ ಶ್ರೀಹರಿಯ ಸಾನ್ನಿಧ್ಯವನ್ನು ಸೇರಲು ಸುಲಭವಾದ ಸೋಪಾನವಾಗಿದೆ. ಇದನ್ನೇ ಪ್ರಸನ್ನವೆಂಕಟರು:

ಕಲ್ಲುಬೀಳಾಲಿ ಮೇಲ್ಮುಗಿಲು ಬೀಳಾಲಿ
ಫುಲ್ಲನಾಭ ನಿನ್ನಪಾದ ಪಲ್ಲವಾಭುಬಿಡೆ ||

ದೃಢಭಕ್ತಿಯ ಪರಾಕಾಷ್ಠತೆಯು ಈ ಕೀರ್ತನೆಯಲ್ಲಿ ವ್ಯಕ್ತವಾಗಿದೆ. ಹೀಗೆ ವಿವಿಧ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ದಾಸರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ೧೧ನುಡಿಯ ಗೀತೆಗಳೇ ಬಹಳ. ಒಂದೇ ವಿಷಯವನ್ನು ಕುರಿತು ವಿವರವಾಗಿ ಇಡೀ ಕೀರ್ತನೆಯನ್ನು ರಚಿಸಿದವರೆಂದರೆ ಪ್ರಸನ್ನ ವೆಂಕಟರೊಬ್ಬರೇ ಎಂದು ಹೇಳಿದರೆ ತಪ್ಪಾಗಲಾರದು.

ಕೀರ್ತನೆಗಳ ಹೊರತಾಗಿ ಈ ಕೆಳಗಿನವುಗಳೂ ದಾಸವರೇಣ್ಯರ ಪ್ರಮುಖ ಕೃತಿಗಳಾಗಿವೆ.

**(೧) ಸಮುಸ್ತನಾಮುಮಣಿಗಣ ಷಟ್‌ಚರಣ ಪದ್ಯಮಾಲಾ :**

ಇದು ಭಾಮಿನೀಷಟ್ಪದಿಯಲ್ಲಿದೆ. ಇದರಲ್ಲಿ ವರ್ಣಮಾಲೆಯಲ್ಲಿ ರಚಿಸಲ್ಪಟ್ಟ ೭೧ ನುಡಿಗಳಿವೆ. ಸಂಸ್ಕೃತದಲ್ಲಿಯ ವಿಷ್ಣು ಸಹಸ್ರನಾಮಾವಳಿಯಂತೆ ಇದರಲ್ಲಿಯೂ ಆರಂಭದಿಂದ ಅಂತದ ವರೆಗೆ ವಿಷ್ಣುನಾಮುಗಳಿವೆ.

**(೨) ನಾರದರು ಕೊರವಂಜಿ ವೇಷತಾಳ್ದ ಚರಿತ್ರೆ :**

ನಾರದರು ಕೊರವಂಜಿಯ ವೇಷತಾಳಿ ರುಕ್ಮಿಣಿಯಲ್ಲಿಗೆ ಹೋದ ವಿಷಯ ಇದರಲ್ಲಿದೆ. ವಿವಿಧ ರಾಗ, ತಾಳದಲ್ಲಿದ್ದ ೩೪ ಪದ್ಯಗಳಿವೆ.

**(೩) ಸತ್ಯಭಾಮಾ ವಿಲಾಸ ಇಲ್ಲವೆ ಶ್ರೀಕೃಷ್ಣ ಪಾರಿಜಾತ :**

ಪಾರಿಜಾತ ಪುಷ್ಪದಿಂದಾಗಿ ಶ್ರೀಕೃಷ್ಣಪರಮಾತ್ಮನಿಗೂ ಆತನ ಭಾಮೆಯರಿಗೂ ನಡೆದ ಸರಸ-ವಿರಸಗಳ ಸುಂದರವಾದ ವರ್ಣನೆ ಇದರಲ್ಲಿದೆ. ೨೯ ನುಡಿಗಳಿವೆ.

**(೪) ಭ್ರಮರ ಗೀತೆ :**

ಭಾಗವತ ದಶಮಸ್ಕಂದದ ಪೂರ್ವಾರ್ಧದಲ್ಲಿಯ ಭ್ರಮರಗೀತೆಯ ವಿಷಯ ಇದರಲ್ಲಿದೆ.

**(೫) ನಾರಾಯಣ ಪಂಜರ :**

ನಾರಾಯಣ ಸ್ತೋತ್ರರೂಪವಾದ ನಾಲ್ವತ್ತು ಪದ್ಯಗಳಿವೆ. "ನಾರಾಯಣ ಕವಚ"ದಲ್ಲಿಯಂತೆ ಆಶೀರ್ವಾದದ ಅಭಯದ ಯಾಚನೆ ಈ ಪದ್ಯಗಳಲ್ಲಿ ಕಂಡುಬರುತ್ತದೆ.

**(೬) ಪ್ರಸನ್ನವೆಂಕಟರ ಭಾಗವತ :**

ಮೂಲ ದಶಮಸ್ಕಂಧ ಭಾಗವತದಲ್ಲಿಯ ನಾಲ್ವತ್ತೆಂಟು ಅಧ್ಯಾಯಗಳಲ್ಲಿ ಪ್ರಸನ್ನವೆಂಕಟದಾಸರು ಕೇವಲ ಕೃಷ್ಣನ ಬಾಲಲೀಲೆಯುಳ್ಳ ಪದ್ಯಗಳನ್ನಷ್ಟೇ ಆಯ್ದುಕೊಂಡಿದ್ದಾರೆ.

ಮೇಲೆ ಹೇಳಿದ ಪ್ರಮುಖ ಕೃತಿಗಳನ್ನಲ್ಲದೇ ಪ್ರಸನ್ನವೆಂಕಟರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಈ ಕೀರ್ತನೆಗಳಲ್ಲೆಲ್ಲಾ ಆರ್ತಭಾವದ ಮಿಡಿತವನ್ನು ಕಾಣುತ್ತೇವೆ. ಮುಮುಕ್ಷಭಾವ, ಸಖ್ಯಭಾವ, ದಾಸ್ಯಭಾವಗಳು ಈ ಎಲ್ಲ ಕೀರ್ತನೆಗಳ ನಾಡಿಯಾಗಿವೆ. ಸುಳಾದಿ–ಉಗಾಭೋಗಗಳನ್ನೂ ಪ್ರಸನ್ನವೆಂಕಟರು ಬರೆದುದುಂಟು. ಹೀಗೆ ದಾಸಸಾಹಿತ್ಯದ ಗಗನಾಂಗಣದಲ್ಲಿ ಒಬ್ಬ ಪ್ರಮುಖ ಪರಿಣಾಸರೆನಿಸಿಕೊಂಡು, ಮುಂದಿನ ದಾಸವರೇಣ್ಯರೆಲ್ಲರಿಗೆ ದಾರಿದೀಪವಾಗಿ ಪ್ರಸನ್ನವೆಂಕಟರು ಶೋಭಿಸಿದ್ದಾರೆ. ಚಿಕ್ಕಂದಿನಲ್ಲಿಯ ಒಂದು ಪುಟ್ಟ ಘಟನೆ ದನಗಾಹಿಯಾದ ವೆಂಕಟೇಶನನ್ನು ಪ್ರಸಿದ್ಧ ಪ್ರಸನ್ನವೆಂಕಟದಾಸರನ್ನಾಗಿ ಮಾಡಿತು. ಇವೆಲ್ಲವೂ ದೈವೀಲೀಲೆಯೆಂದು ಹೇಳಬಹುದು.



ಶ್ರೀ ದಾಸಗುರುಭ್ಯೋ ನಮಃ

# ಕೆಲವು ಮಹತ್ವದ ದಾಸರ ವಿವರ

| ಅ. ಸಂ. | ದಾಸರ ಹೆಸರು | ಕಾಲ (ಕ್ರಿ. ಶ.) | ಅಂಕಿತ | ಕೃತಿಗಳು |
|---|---|---|---|---|
| ೧. | ನರಹರಿತೀರ್ಥ | ಕ್ರಿ. ಶ. ೧೨೭೫ | ರಘುಕುಲತಿಲಕ ಅಥವಾ ಶ್ರೀ ರಘುಪತಿ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೨. | ಶ್ರೀಪಾದರಾಯ | ಕ್ರಿ. ಶ. ೧೪೨೨-೧೪೮೦ | ರಂಗವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೩. | ವ್ಯಾಸರಾಯ | ಕ್ರಿ. ಶ. ೧೪೪೭-೧೫೩೯ | ಶ್ರೀಕೃಷ್ಣ ಅಥವಾ ಕೃಷ್ಣ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೪. | ವಾದಿರಾಜ | ಕ್ರಿ. ಶ. ೧೪೮೦-೧೬೦೦ | ಹಯವದನ | ಕೀರ್ತನೆ, ವೈಕುಂಠ ವರ್ಣನೆ, ಸ್ವಪ್ನ-ಗದ್ಯ, ಲಕ್ಷ್ಮೀ ಶೋಭಾನೆ, ಗುಂಡಕ್ರಿಯಾ-ಇತ್ಯಾದಿ ಕಾವ್ಯಕೃತಿಗಳು. |
| ೫. | ಪುರಂದರದಾಸ | ಕ್ರಿ. ಶ. ೧೪೮೪-೧೫೬೪ | ಪುರಂದರವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೬. | ಕನಕದಾಸ | ಕ್ರಿ. ಶ. ೧೫೦೯-೧೬೦೭ (?) | ಕಾಗಿನೆಲೆಯಾದಿಕೇಶವ ಅಥವಾ ಬಾಡದಾದಿಕೇಶವ | ಕೀರ್ತನೆ ಹಾಗೂ ಮೋಹನತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿ-ಭಕ್ತಿಸಾರ ಎಂಬ ಕಾವ್ಯ ಕೃತಿಗಳು. |
| ೭. | ವಿಜಯದಾಸ | ಕ್ರಿ. ಶ. ೧೬೩೭-೧೭೩೫ | ವಿಜಯವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೮. | ಪ್ರಸನ್ನವೆಂಕಟದಾಸ | ಕ್ರಿ. ಶ. ೧೬೮೦-೧೭೫೨ | ಶ್ರೀನಿವಾಸ ಅಥವಾ ಪ್ರಸನ್ನವೆಂಕಟ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೯. | ಗೋಪಾಲದಾಸ | ಕ್ರಿ. ಶ. ೧೭೨೧-೧೭೬೨ | ಗೋಪಾಲವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೧೦. | ಜಗನ್ನಾಥದಾಸ | ಕ್ರಿ. ಶ. ೧೭೨೮-೧೮೦೯ | ಜಗನ್ನಾಥವಿಠಲ | ಕೀರ್ತನೆ, ಹಾಗೂ ಹರಿಕಥಾಮೃತಸಾರ (ಕಾವ್ಯ), ಸುಳಾದಿ, ಉಗಾಭೋಗಗಳು. |
| ೧೧. | ಹೆಳವನಕಟ್ಟೆ ಗಿರಿಯಮ್ಮ | ಕ್ರಿ. ಶ. ಸು. ೧೭೫೦ | ಹೆಳವನಕಟ್ಟೆಯ ರಂಗ | ಕೀರ್ತನೆ, ಚಂದ್ರಹಾಸ ಕಥೆ, ಸೀತಾ-ಕಲ್ಯಾಣ, ಬ್ರಹ್ಮಕೊರವಂಜಿ. |

ರಾಗ–ನಾಟ

ಗಣಪತಿವರವಿೂಶಂ ಸ್ತೌಮಿ ಸರ್ವಾರ್ಥಸಿದ್ಧಿಂ
ಪ್ರಪದ್ಯೇ ತವ ಕಾಮಾಕ್ಷಿ ಚರಣಾ ಶರಣಂ ಸದಾ ||

ಯತ್ ಸೌಂದರ್ಯಾಂಬುಧಿ ದೃಷ್ಟ್ವಾಂ ತ್ರಿನೇತ್ರೋ
ಭೂನ್ಮಹೇಶ್ವರಂ ||

ಮನೋಜವಂ ಮಾರುತತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ
ವಾತಾತ್ಮಜಂ ವಾನರಯೂಥ ಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ ||

ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ
ಜ್ಞಾನ ಪ್ರದಾಯ ವಿಬುಧಾಸುರ ಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೆ ||

## ಹರ ಹರ ಪುರಹರ

ರಾಗ–ಕಲ್ಯಾಣಿ (ಭೀಮಪಲಾಸ) ಏಕತಾಳ (ತೀನ್‌ತಾಲ)

ಹರಹರ ಪುರಹರ್ಗಿರಿಜಾ ಮನೋಹರ
ಸುರವರ ಕರುಣಾಕರ।ಶರಣರ ಸುರತರು
ವರಪಂಪಾಪತಿ ವಿರುಪಾಂಬಕ ಹೊ ಶುಭದ || ಪಲ್ಲ ||

ಮದನ ಮಥನ ಪಂಚವದನ ಕೈಲಾಸದ
ಸದನ ಸದಾಶಿವ ನಮೋ ನಮೋ ॥
ಹದಿನಾಕು ಭುವನದ ಹದನ ಬಲ್ಲರಿಜಿತ ।
ಕದನ ಕಲುಷಹರ ನಮೋ ನಮೋ ॥ ೧ ॥

ತಾರಕಪತಿವರ ಭೂರಿಕೃಪಾಂಬುಧಿ ।
ತಾರಕ ಪಿತಹರ ಜಯಾ ಜಯ ॥
ತಾರಕ ಉಪದೇಶಕಾರಕ ಘನಭವ ।
ತಾರಕ ಮೃತ್ಯುಂಜಯಾ ಜಯ ॥ ೨ ॥

ಶೇಷಾಭರಣ ವಿಭೂಷಾಭವ ವಿ- ।
ಶೇಷಾಭಕತಪ್ರಿಯ ವಿಭೋ ॥
ಶೇಷಾ ಭೂಭೃತಪ್ರೋಷಾ ಪ್ರಸನ್ವೆಂಕ– ।
ಟೇಶ ಭಜನಶೀಲ ವಿಭೋವಿಭೋ ॥ ೩ ॥

## ರಕ್ಷಿಸು ರಕ್ಷಿಸು ದೇವ

ರಾಗ–ಶಂಕರಾಭರಣ (ಭೂಪ) ತಾಳ–ಅಟ (ದೀಪಚಂದಿ)

ರಕ್ಷಿಸು ರಕ್ಷಿಸು ದೇವ । ವಿಶ್ವ–
ಕುಕ್ಷಿಯೆ ಭಕ್ತಸಂಜೀವ ॥
ಪಕ್ಷಿಗಮನ ಕಾಯೋದಾತಾ । ಭೃತ್ಯ
ಪಕ್ಷನೆ ಶ್ರೀ ಪ್ರಾಣನಾಥ ॥ ಪಲ್ಲ ॥

ಜಾರಿದ ಶ್ರುತಿಯ ತಂದವನೆ । ಉ–
ದಾರಿ ವಿಕ್ರಮ ತಮಹರನೆ ॥
ವಾರಿಧಿಯೊಳುದಿಸಿದನೆ । ಮಂ–
ದಾರ ಗಿರಿಯನೆತ್ತಿದನೆ ॥ ೧ ॥

ರಂಭೆಗೆ ತತ್ವ ಹೇಳಿದನೆ | ಹೇ-
ರಾಂಬಕನ ಚುಚ್ಚಿದವನೆ ||
ಕಂಬವ ಸೀಳ್ದು ನಿಂದವನೆ | ಆ-
ದಂಭೋಳಿ ವೈರಿ ಬಾಲಪನೆ || ೨ ||

ಪದ್ಮಜಾಂಡವನೊಡೆದವನೆ | ಬಲಿ-
ಸದ್ಮವ ಬಿಡದೆ ಕಾಯಿದನೆ ||
ಛದ್ಮಿ ಪಾರ್ಥಿವರ ಸಂಹರನೆ | ಕರ-
ಪದ್ಮದಿ ಪರಶು ಪಿಡಿದನೆ || ೩ ||

ಅಡವಿ ಪ್ರಾಣಿಗಳನಾಳುವನೆ | ಹತ್ತು-
ಹೆಡಕಿನವನ ತಲೆ ಕಿಡಿದವನೆ ||
ಮಡದಿಗೆ ಗಿಡವನಿತ್ತವನೆ | ಭೀಮ-
ಮಡದಿಯ ಲಜ್ಜೆ ಕಾಯಿದನೆ || ೪ ||

ಮಿಥ್ಯೆಯ ಹೊಲಬು ಹೇಳಿದನೆ | ಖಳ-
ದೈತ್ಯರ ವಶವ ಮಾಡಿದನೆ ||
ಮತ್ತ ಕರಿಯ ವಪುಹರನೆ | ನನ್ನ-
ಕರ್ತಾ ಪ್ರಸನ್ವೆಂಕಟನೆ || ೫ ||

## ತಂದೆ ಪುರಂದರದಾಸರ ಸ್ಮರಿಸುವೆ

ರಾಗ–ಶಂಕರಾಭರಣ (ಯಮುನ) ತಾಳ–ಅಟ (ದೀಪಚಂದಿ)

ತಂದೆ ಪುರಂದರದಾಸರ ಸ್ಮರಿಸುವೆ ಎನ್ನ
ಮಂದ ಮತಿಗಳೆದು ಹರಿಭಟನೆನಿಸುವೆ || ಪ ||

ಗುರು ವ್ಯಾಸರಾಜರ ಚರಣಾಬ್ಜ ಭಟ ಚರಣ |
ವಿರತಿ.ಭಕುತಿ ಜ್ಞಾನಾರ್ಣವನಾ ||
ಪರೋಪನಿಷ್ಟದ್ವಾರಿನಿಧಿಗೆ ತಿಮಿಂಗಲನಹನ |
ಧರೆಯ ಕವಿಕುಲಶಿಖಾಮಣಿಯೆನಿಪನ ||೧||

ದಿನದಿನದಿ ದ್ರವ್ಯಾರ್ಥಲಾಭದಲಿ ತುಷ್ಟನ |
ಕನಕಲೋಷ್ಟ ಸಮಾನ ನಿರೀಕ್ಷಿಸುವನ ||
ಘನಸಿದ್ಧಿಗಳು ತಾವು ಬರಲೊಡಂಬಡದೆ ಹರಿ |
ಗುಣ ಕೀರ್ತಿಯಲ್ಲಿ ಪರವಶದಲಿಹನ ||೨||

ಭವಜಲಗೊಪ್ಪದಕೆ ಸರಿ ದಾಟಿ ಕಾಮಕ್ರೋ- |
ಧವಮೆಟ್ಟಿ ಭಕ್ತಿಸುಧೆಯುಂಡು ತೇಗಿ ||
ಭುವಿಯೊಳು ನಿಜಕೀರ್ತಿ ಹರಹಿ ಪವನಮತ- |
ದವರೆನಿಪ ದಾಸರಿಗೆ ತವರೂಪ ತೋರಿದನ ||೩||

ಕವನೋಕ್ತಿ ಮಳೆಗರೆದು ಹರಿದಾಸ- |
ಪವರ್ಗಳಿಗೆ ವಿರಳಾನಂದವಿತ್ತರ್ಥಿಸುವರಾ ||
ನವಭಕುತಿ ಮನಗಂಡು ಸವೆಯದಾನಂದ ಪುರಪ- |
ಥವನು ತೋರಿಸಿದಂಥ ಬಹು ಕೃಪಾಕರನಾ ||೪||

ಗೀತತಾಯಿ ಸುಳಾದ್ಯುಗಾಭೋಗ ಪದ್ಯ ಪಠ |
ವ್ರಾತ ಸಂಬಂಧ ರಚಿಸಿ ವಿಠ್ಠಲನ ||
ಪ್ರೀತಿಬಡಿಸಿ ಪ್ರತ್ಯಕ್ಷಕಂಡು ನಲಿವವೈಷ್ಣವಾಗ್ರ |
ನಾಥ ಪ್ರಸನ್ವೆಂಕಟ ಕಷ್ಣ ಪ್ರಿಯನ ||೫||

## ಏಳು ಶ್ರೀ ಗುರುರಾಯ ಬೆಳಗಾದಿತಿಂದು

ರಾಗ–ಬಿಭಾಸ ತಾಳ–ಝಂಪಾ

ಏಳು ಶ್ರೀಗುರುರಾಯ ಬೆಳಗಾದಿತಿಂದು |
ಧೂಳಿದರುಶನ ಕೊಡಿರಿ ಈ ವೇಳೆ ಶಿಷ್ಯರಿಗೆ ‖ ಪ ‖

ಏಳು ಗುರುರಾಘವೇಂದ್ರ ಏಳು ದಯಾಗುಣಸಾಂದ್ರ |
ಏಳು ಕುಮುದಕೆ ಚಂದ್ರ ಶ್ರೀರಾಘವೇಂದ್ರ ‖ ಅ. ಪ. ‖

ಅಶನವಸನಗಳಿಲ್ಲವೆಂಬ ವ್ಯಸನಗಳಿಲ್ಲ |
ಮುಸುಕ್ಹಾಕಿ ಮೋಸದಲಿ ಮೋಹಿಸಿದೆನಲ್ಲ ‖
ಅಸುರಾರಿಯ ಸ್ಮರಿಸದೆ ಪಶುಶುವಿನೊಲು ಈ ದೇಹ |
ವಸುಮತಿಯು ಏಳು ಬಹಳ್ಹಸಗೆಟ್ಟಿತಲ್ಲ ‖ ೧ ‖

ನಾನು ನನ್ನದುಯೆಂದು ಹೀನ ಮನಸಿಗೆ ತಂದು |
ಏನು ಮಾಡುವ ಕರ್ಮ ನಾನೆ ಅಹುದೆಂದು ‖
ಸ್ವಾಮಿ ಕರ್ತುತ್ವವನು ತಿಳಿಯಲಿಲ್ಲ ನಾನೊಂದು |
ನೀನೇ ಉದ್ಧರಿಸಯ್ಯ ದೀನದಯಾಸಿಂಧೋ ‖ ೨ ‖

ಅನ್ಯರ ಕೈಯಲ್ಲಿ ನಿನ್ನವರನಿರಿಸುವದು |
ಅನ್ಯಾಯುವಾಯ್ತು ಪಾವನ್ನ ಗುರುರಾಯಾ ‖
ಎನ್ನ ಮಾತಲ್ಲವಿದು ನಿನ್ನ ಮಾತೇ ಸರಿ |
ಮನ್ನಿಸಿ ಆಗು ಪ್ರಸನ್ನ ಗುರುರಾಯ ‖ ೩ ‖

ವೇದಶಾಸ್ತ್ರಗಳನ್ನು ಓದಿ ಪೇಳ್ದವನಲ್ಲ |
ಭೇದಾಭೇದವನು ತಿಳಿಯಲಿಲ್ಲ ‖
ಸಾಧುಸಜ್ಜನರ ಸಹವಾಸ ಮೊದಲಿಲ್ಲ |
ಹೀಗಾಗಿ ಮಾನ ಮಾರಿಸಿದಿ ಉಳಿಸಲಿಲ್ಲ ‖ ೪ ‖

ಆಶೆಗೊಳಗಾದೆನೊ ಹೇಸಿ ಮನುಜನು ನಾನು |
ಕ್ಲೇಶ ಭವಸಾಗರದೋಳೀಸುತಿಹೆನೋ ‖
ಏಸು ಜನ್ಮದಿ ಎನ್ನಗಾಸಿ ಮಾಡಿದಿ ಮುನ್ನ |
ದಾಸನಾಗುವೆ ತೋರೋ ಪ್ರಸನ್ನವೆಂಕಟನ ‖ ೫ ‖

## ವಿಠಲಾ ಪಿಡಿ ಎನ್ನ ಕೈಯ್ಯಾ

ರಾಗ-ಕಾಂಬೋದಿ (ಯಮುನ) ತಾಳ-ಧ್ರುವ (ದೀಪಚಂಡಿ)

ವಿಠಲಾ ಪಿಡಿ ಎನ್ನ ಕೈಯ್ಯಾ |
ವಿಠಲ ಪಂಢರಿರಾಯಾ |
ವಿಠಲಾ ಭಕ್ತವತ್ಸಲ ವಿಠ್ಠಲಾ ಹರಿ ವಿಠ್ಠಲಾ || ಪ ||

ಧಿಟ್ಟಾ ಪುಂಡಲೀಕ ತನ್ನಾ |
ಪುಟ್ಟಿಸಿದವರ ಮನ ||
ಮುಟ್ಟಿ ಭಜಿಸಲು ಚಿತ್ತ- |
ಗೊಟ್ಟು ಬಂದೆಯಾ ವಿಠ್ಠಲಾ || ೧ ||

ಕೊಟ್ಟಾ ಮಾತಿಗೆ ಭಕ್ತರ |
ಕಟ್ಟನೊಳು ತಿಲುಕಿ ಕಂ- ||
ಗೆಟ್ಟಯ ಭವಾಬ್ಧಿಲಿ ನಿನ್ನ |
ಗುಟ್ಟು ತೋರಯ್ಯಾ ವಿಠ್ಠಲಾ || ೨ ||

ಬಿಟ್ಟು ಬರಲಾಗದ ನಿನಗೆ |
ಥಟ್ಟನೆ ನೀಡಲು ಚಲುವ ||
ಇಟ್ಟಗೆ ಮೇಲೆ ಅಂಘ್ರಿಪದ್ಮ |
ಇಟ್ಟು ನಿಂತೆಯಾ ವಿಠ್ಠಲಾ || ೩ ||

ನೆಟ್ಟನೆ ವೇದವ ತಂದು ।
ಬೆಟ್ಟಯೆತ್ತಿ ಇಳೆಯಾ ಪೊತ್ತಿ ॥
ಸಿಟ್ಟು ತಾಳ್ದ ವಟುವೆ ಖಳರ ।
ಸಿಟ್ಟಲ್ಯಳದೆಯಾ ವಿಠ್ಠಲಾ ॥ ೪ ॥

ಕಟ್ಟಕಡೆಯಲಿ ಜಗ– ।
ಜಟ್ಟ ಗೋಪನಾಗಿ ಬುದ್ಧಾ ॥
ಧಿಟ್ಟ ಕಲ್ಕ್ಯವತಾರ ತಾಳಿ ।
ಕೃಷ್ಣ ಪ್ರಸನ್ವೆಂಕಟ ವಿಠ್ಠಲ ॥ ೫ ॥

## ಮರೆಯದಿರು ಮನವೆ ಮಾಧವನಾ

ರಾಗ–ಧನಾಶ್ರೀ (ಪೂರಿಯಾ ಧನಶ್ರೀ) ತಾಳ–ಅಟ್ಟ (ದೀಪಚಂದಿ)

ಮರೆಯದಿರು ಮನವೆ ಮಾಧವನಾ । ನಮ್ಮ ।
ದುರಿತ ದಾರಿದ್ರ್ಯವನು ಹರಿಸಿ ಹೊರುವವನಾ ॥ ಪ ॥

ಆಳರಿತು ಊಳಿಗವ ಕೊಂಡು ದಣಿವಂತೆ ।
ಮೇಲಾಗಿ ಜೀವ ಕೊಡುವ ದೇವನ ॥
ಕಾಲಕಾಲಕೆ ಮಾಳ್ಪ ನಡೆ ತಪ್ಪು ನುಡಿ ತಪ್ಪು ।
ಆಲೋಚಿಸದೆ ಕರುಣಿಸುವ ಕರುಣನಾ ॥ ೧ ॥

ಮೂಢನಾಗಲಿ ಮತಿಯುಳ್ಳವನಾಗಲಿ ।
ಪಾಡಿದಾಕ್ಷಣ ಭೃತ್ಯನೆಂದೊಲಿವ ॥
ಕೂಡಿಕೊಂಬುವ ಧೊರೆಗಳಲಿ ಹರಿಯಲ್ಲದ ।
ನಾಡಾಡಿ ಬಣಗು ಕಲ್ಲುಗಳ ಬೇಡುವರೇ ॥ ೨ ॥

ಮುನ್ನಾರು ಅನ್ಯದೇವರ ಭಜಿಸಿ ಭವಗೆದ್ದ- ।
ರಿನ್ನಾರು ಹರಿಯೊಲಿಪೆಯಲಿ ದಣಿವರು ॥
ನಿನ್ನ ಗುರುಗಳಿಂದರಿತು ನೆನೆ ನಂಬಿ ಪ್ರ– ।
ಸನ್ನಾ ವೆಂಕಟಪತಿಯೆ ಪದವನು ಈವ ॥ ೩ ॥

## ಗೆಲಿಸು ಭವವ ಗುರು ಹನುಮಂತಾ

ರಾಗ-ವರಾಳಿ (ಕಾಫಿ) ತಾಳ-ಆದಿ (ತೀನ್‌ತಾಲ)

ಗೆಲಿಸು ಭವವ ಗುರು ಹನುಮಂತಾ ಖಳ |
ಜಲಧಿ ವಡವಾನಳ ಬಲವಂತಾ ‖ ಪ ‖

ದಾಶರಥಿಯ ಪದವನೆ ನಂಬಿ ಇತ- |
ರಾಶೆಯಿಲ್ಲದೆ ಭಕ್ತಿರಸ ತುಂಬಿ ‖
ತೋಷ ವೃತ್ತಿಗೆ ಕಡೆಮೊದಲಿಲ್ಲಾ ಸರ್ವ- |
ದೇಶಕೋಶದೆಣಿಕೆ ಅರಿತನೆಲ್ಲ ‖ ೧ ‖

ಅಂಧಕಾತ್ಮಜ ತೃಣಬೃಹದ್ಭಾನು ಗೋ- |
ವಿಂದಾಘ್ರಿಬಿಸಜ ಮಧುಪ ನೀನೂ ‖
ಸಂಧಕಾಯುನ ಸಂಹಾರಿ ದೇವಾ ದಯಾ- |
ಸಿಂಧು ವೈಷ್ಣವಜನ ಸಂಜೀವಾ ‖ ೨ ‖

ಶ್ರೀಸತ್ಯವತಿಜನ ನೇಮದಲಿ ಹರಿ |
ದ್ವೇಷಿಗಳನು ಗೆದ್ದೆ ಭೂಮಿಯಲಿ ‖
ಶ್ರೀಸುಖತೀರ್ಥ ಭೀಮಕಪಿವರದಾ ಸ್ವಾಮಿ |
ಪ್ರಸನ್ನವೆಂಕಟೇಶ ಭೃತ್ಯಗಣ ಮುದದಾ ‖ ೩ ‖

## ಪಾಲಿಸೋ ಮಾಧವಾ ಈ ತೆರದಲಿ

ರಾಗ-ಕಾಫಿ ತಾಳ-ಝಂಪಾ

ಪಾಲಿಸೋ ಮಾಧವಾ ಈ ತೆರದಲೀ ‖ ಪ ‖

ನಿನ್ನನೇ ಹಾಡಿಸಿ ನಿನ್ನವರ ಕೂಡಿಸಿ |
ನಿನ್ನ ಸಾಹಸಕೀರ್ತಿಯನ್ನೆ ಕೇಳಿಸುವಂತೆ ‖ ೧ ‖

ನೀಚರಾಧೀನ ಮಾಡಿ ನಾಚಿಸಬೇಡ ಸ- ।
ದಾಚಾರ ವೃತ್ತಿಯಲ್ಲಾಚರಿಪಂತೆನ್ನ ॥ ೨ ॥

ನೀ ಮರಿಸದಿರು ಶ್ರೀ ನಾಮವ ಜಿಹ್ವೆಗೆ ।
ಸ್ವಾಮಿ ಪ್ರಸನ್ವೆಂಕಟ ಮನೋಹರ ಕೃಷ್ಣಾ ॥ ೩ ॥

## ನೀ ಕರುಣಿಸೋ ಸಿರಿವಿಠಲಾ

ರಾಗ–ಭೈರವಿ ತಾಳ–ಆದಿ (ತೀನ್‌ತಾಲ)

ನೀ ಕರುಣಿಸೋ ಸಿರಿವಿಠಲಾ
ಇನ್ಯಾಕಾಲಸ್ಯವು ಹರಿವಿಠಲಾ ॥ ಪ ॥

ದೋಷಿಗಳೊಳಗೆ ಹಿರಿಯನು ನಾ ।
ನಿರ್ದೋಷಿಗಳರಸು ನೀ ರಂಗಯ್ಯಾ ॥
ಸಾಸಿವೆಯಷ್ಟು ಭಕುತಿ ನಾನರಿಯೆ ।
ಶೇಷಶಾಯಿ ನೀ ರಂಗಯ್ಯಾ ॥ ೧ ॥

ಭವಸಾಗರ ನಾ ಮುಣುಗುವೆ ಸುಮ್ಮನೆ ।
ಅವಲೋಕಿಪರೆ ನೀ ರಂಗಯ್ಯಾ ॥
ನವವಿಷಯಕೆ ಮುಗ್ಗುತಲಿದೆ ಎನ್ನ ಮನ ।
ಬವಣಿಯ ಬಿಡಿಸೋ ನೀ ರಂಗಯ್ಯಾ ॥ ೨ ॥

ತನುಸಂಬಂಧಿಗಳತಿಶಯ ಸ್ವಾರ್ಥರು ।
ಎನಗಾರಿಲ್ಲೆಲೋ ರಂಗಯ್ಯಾ ॥
ಬಿನುಗು ಮಾನವರನುಸರಣೆಯಲಿ ।
ದಣಿಸಿದರಯ್ಯಾ ರಂಗಯ್ಯಾ ॥ ೩ ॥

ನಿಶಿದಿನ ಅಶನ !ವಸನಕೆ ಹೆಣಗುವೆ |
ಹುಸಿ ಸಂಗ್ರಹಿಸಿದೆ ರಂಗಯ್ಯಾ ||
ನಿಷಿದ್ಧಗಳಂಜಿಕೆ ಇಲ್ಲವು ನರಕದ |
ಘಸಣಿಗೆ ಅಂಜುವೆ ರಂಗಯ್ಯಾ || ೪ ||

ಝಾವಕೆ ಸಾವಿರ ಮಾಡುವೆ ತಪ್ಪನು |
ಕಾಯೋ ದಯಾಂಬುಧಿ ರಂಗಯ್ಯಾ ||
ನಾವಡಲ್ವೊಕ್ಕೆನೊ ಪ್ರಸನ್ವೆಂಕಟಪತಿ |
ಜೀವಕೆ ಹೊಣೆ ನೀ ರಂಗಯ್ಯಾ || ೫ ||

## ಎಂದು ಕಾಂಬೆನು ಎನ್ನ ಸಲಹುವ

ರಾಗ- ಶ್ರೀ (ಬಸಂತ) ತಾಳ- ತ್ರಿಪುಟ (ರೂಪಕ)

ಎಂದು ಕಾಂಬೆನು ಎನ್ನ ಸಲಹುವ |
ತಂದೆ ಉಡಪಿಯ ಜಾಣನ ||
ಮಂದಹಾಸ ಪ್ರವೀಣನಾ |
ಇಂದಿರಾಭೂರಮಣನಾ || ಪ ||

ಕಡಲದಡದೊಳು ಎಸೆವ ರಂಗನ |
ಕಡಗೋಲ್ನೇಣನು ಪಿಡಿದನ ||
ಮೃಡಪುರಂದರರೊಡೆಯನ ಈ- |
ರಡಿಗಳಲಿ ಶಿರವಿಡುವೆನಾ || ೧ ||

ದೇವಕಿಯ ಜಠರದಲಿ ಬಂದನ |
ಆವ ಪಳ್ಳಿಲಿ ನಿಂದನ ||
ಮಾವ ಕಂಸನ ಕೊಂದನ |
ಕಾವನಯ್ಯ ಮುಕುಂದನ || ೨ ||

ಪೂರ್ಣಪ್ರಜ್ಞರಿಗೊಲಿದು ದ್ವಾರಕಿ |
ಮಣ್ಣಿನೊಳು ಪ್ರಕಟಿಸಿದನ ಭ- ||
ವಾರ್ಣವಕೆ ಪ್ಲವನಾದನ ಪ್ರ-|
ಸನ್ನವೆಂಕಟಕೃಷ್ಣನ || ೩ ||

## ಸಲಹು ವೆಂಕಟರಮಣ ದಯಾಂಬುಧಿ

ರಾಗ–ಮಾರವಿ (ಸೋಹನಿ) ತಾಳ–ಆದಿ (ತೀನ್‌ತಾಲ)

ಸಲಹು ವೆಂಕಟರಮಣ ದಯಾಂಬುಧಿ
ಸಲಹು ವೆಂಕಟರಮಣ || ಪ ||

ಮಸ್ತಕದೊಳೊಪ್ಪುವ ಮಾಣಿಕ ಮುಕುಟದ |
ಕಸ್ತೂರಿ ನಾಮದ ಚಲುವಾ ||
ವಿಸ್ತರ ಕದಪಿಲಿ ಹೊಳೆವ ಕುಂಡಲ ಪ್ರಾ- |
ಶಸ್ತವದನ ಜಗಜೀವಾ || ೧ ||

ಎಳೆನಗೆ ತಿಂಗಳ ಕಾಂತೆಲಿ ಹೃತ್ತಾಪ |
ಕಳೆವ ಕರುಣಿ ಸಿರಿಕಾಂತಾ ||
ಗಳದೊಳು ವನಮಾಲೆ ವೈಜಯಂತಿ ಪದಕಗ- |
ಳೊಲವಾ ಮಂಗಳಮೂರ್ತಿಮಂತ || ೨ ||

ಮುತ್ತಿನ ಸರ ಸರಪಳಿ ಭುಜಕೀರ್ತಿಯು |
ಎತ್ತಿದ ಶಂಖಾರಿ ಪಾಣೀ ||
ರತ್ನನ ಮೇಲೊಡ್ಯಾಣ ಕಂಕಣಮುದ್ರಿ |
ಒತ್ತಿ ಅಭಯವರದನೇ || ೩ ||

ಉಟ್ಟು ಪೊಂಬಟ್ಟೆ ಕಟಾರೆ ಕಟ್ಟಿರುವ |
ದುಷ್ಟರ ರಣಜಿತ ವೀರ ||
ಇಟ್ಟ ವಜ್ರದ ಕಾಲಂದಿಗೆ ಪಾವುಗೆ |
ಮೆಟ್ಟಿದ ಸುರರ ಮಂದಾರ || ೪ ||

ಆಗರು ಚಂದನ ಕಪ್ಪೂರ ಕೇಶರ ಸುರ- |
ಭಿಗಳಿಗೆ ಅತಿಪ್ರಿಯ ಅಂಗ ||
ಮಘಮಘಿಸುವ ಮಲ್ಲಿಗೆ ಸಂಪಿಗೆಯ ಮಾ- |
ಲೆಗಳ ಪ್ರಸನ್ವೆಂಕಟ ರಂಗಾ || ೫ ||

## ಪ್ರಹ್ಲಾದವರದ ಭಯ ಗಜಕೆ ಸಿಂಹ ಪರಮ

ರಾಗ-ಕಾಂಬೋದಿ (ಭೂಪ) ತಾಳ-ಝಂಪೆ (ಝಪ್)

ಪ್ರಹ್ಲಾದವರದ ಭಯ ಗಜಕೆ ಸಿಂಹ ಪರಮ |
ಆಹ್ಲಾದ ಪದವಿತ್ತು ಪೊರೆಯೋ ನರಸಿಂಹಾ || ಪ ||

ಹಿಂದೆ ಹಿರಣ್ಯಕನಲ್ಲಿ ಜನಿಸಿದ ಪ್ರಹ್ಲಾದ |
ನೊಂದವನ ಬಾಧೆಯಲಿ ಮರುಗಿ ಸೊರಗಿ ||
ಇಂದಿರೇಶ ಸಲಹೆನಲು ಗಾಢಸ್ತಂಭದಲೊದಗಿ |
ಬಂದವನುದರ ಬಗಿದೆ ರುಧಿರವನು ಸವಿದೆ || ೧ ||

ಅಸುರ ಕೆಡಲದಕಂಡು ಅತಿಹರುಷದಿಂದ ತ್ರಿ- |
ದಶರಂಬರದಿ ಪೂಮಳೆಗರೆಯಲು ||
ಶಿಶುವೇಕ ಮಾನಸದಿ ಮೊರೆಹೊಕ್ಕು ಪೊಗಳುತಿರೆ |
ಬಿಸಜಾಕ್ಷವನ ಕರುಣದಿಂದ ಸಲುಹಿದೆಯಾಗಿ || ೨ ||

ಹಲವು ಯೋನಿಗಳಲ್ಲಿ ತಿರುಗಿ ಬಳಲಿದೆನಯ್ಯಾ |
ನಳಿನಾಕ್ಷ ನಿಮ್ಮ ಗುರುತವ ಕಾಣದೆ ||
ಇಳೆಯಲ್ಲಿ ದ್ವಿಜನಾಗಿ ಪುಟ್ಟಿ ತವ ಪದವಿಡಿದೆ |
ಗೆಲಿಸು ಭವದುರಿತವ ಪ್ರಸನ್ವೆಂಕಟ ನೃಸಿಂಹಾ || ೩ ||

## ನಮ್ಮ ತಪ್ಪೇನು? ಹೇ ಘನ್ನ ನಿನಗೆ

ರಾಗ–ಧನಶ್ರೀ (ಬಾಗೇಶ್ರೀ) ತಾಳ–ಝಂಪಾ (ದೀಪಚಂದಿ)

ನಮ್ಮ ತಪ್ಪೇನು ? ಹೇ ಘನ್ನ ನಿನಗೆ ಕೋಟಿ |
ಬೊಮ್ಮಾಂಡನಾಯಕಾ ಅಂಚಿತ್ಯಮಹಿಮ || ಪ ||

ಒಂದು ನಾಮೋಚ್ಚಾರಣೆಯಲಿ ಪರಗತಿ ಪಡೆದು |
ಒಂದು ಗುಣಪಿಡಿದು ಕಡೆಗಾಂಬರು ಭವ ||
ಮಂದಮತಿಯಲಿ ಭಜಿಸಿ ಮಹಾಪಾಪ ನೂಕುವರು |
ಇಂದಿರಾರಾಧ್ಯಪಾದ ಭಕ್ತವತ್ಸಲನೆ || ೧ ||

ನಾರಾಯಣನೆ ನಿನ್ನ ಮಂಗಳ ಮೈ- ಘಾಳಿಯಲಿ |
ಮೂರು ಲೋಕದ ಪುಣ್ಯಫಲ ದೊರೆವುದು ||
ಸೂರ್ಯನ ಮಗನವರು ನಿನ್ನ ಬಂಟರಿಗಂಜಿ |
ಜಾರುವರು ಶ್ರೀಜಾನಕಿಯ ರಮಣ ರಾಮಾ || ೨ ||

ಶಿಶುಗಳಪರಾಧಕ್ಕೆ ನಯನದಂಜಿಕೆ ಶಿಕ್ಷೆ |
ಪಶು ಇರಕಳಿಗೆ ಕಂಠಕಾಷ್ಠ ಶಿಕ್ಷೆ ||
ವಿಷಮ ಹಿಂಸೆಯು ಸಲ್ಲ ಪ್ರಸನ್ನವೆಂಕಟರಮಣಾ |
ವಿಷಯಾಸೆ ಭವಶಿಕ್ಷೆ ಸಾಕೆನಗೆ ತಂದೇ || ೩ ||

## ದಯಮಾಡು ದಯಮಾಡು ಶ್ರೀನಿವಾಸಾ

ರಾಗ–ಯಮನ (ಬಾಗೇಶ್ರೀ) ತಾಳ–ಝಂಪೆ (ಝಪ್)

ದಯಮಾಡು ದಯಮಾಡು | ಶ್ರೀನಿವಾಸಾ ಭವ- |
ಭಯ ನಿವಾರಣ ಭಜಕ ಭಕ್ತರಘನಾಶಾ || ಪ ||

ನೇಮವೆನ್ನಲಿಲ್ಲ ನಾಮದರಿಕೆ ಇಲ್ಲ |
ನಾ ಮಹಾಪಾಪಿಯು | ಸ್ವಾಮಿ ನೀನೊಲಿದು ಗಡ || ೧ ||

ಸದ್ಧರ್ಮ ಸರಕಿಲ್ಲಾ | ಶುದ್ಧ ಬುದ್ಧಿಯಿಲ್ಲಾ ||
ಉದ್ಧರಿಸೆನ್ನನಿ | ರುದ್ಧ ಹರಿ ಕರುಣೀ || ೨ ||

ಸತ್ಕುಲ ಹೊಂದೇನು | ಸತ್ಕರ್ಮ ಮಾರ್ಗಿಲ್ಲಾ ||
ಭಕ್ತರಕ್ಷಕ ಪಾಪ | ಮುಕ್ತ ದೇವರ ದೇವ || ೩ ||

ಅವಗುಣದ ಎಣಿಕೆಯಾ | ವಿವರ ನೋಡದೆ ಅಯ್ಯಾ ||
ಜವನ ಬಲೆಯನು ತಪ್ಪಿ | ಸುವ ಸರೀಸೃಪಶಯ್ಯಾ || ೪ ||

ಅಜಮಿಳ ವ್ಯಾಧ ಆ | ಗಜ ಅಹಲ್ಯೋದ್ಧರ ||
ನಿಜ ಪ್ರಸನ್ವೆಂಕಟೇಶ | ಸುಜನ ಪರಿಪೋಷ || ೫ ||

## ಹರಿಯೆ ಎನಗಾರು ಗತಿಯೋ

ರಾಗ-ಮುಖಾರಿ (ತೋಡಿ) ತಾಳ-ಝಂಪೆ (ದೀಪಚಂದಿ)

ಹರಿಯೆ ಎನಗಾರು ಗತಿಯೊ | ನೀನಲ್ಲದೆ || ಪ ||

ಹಿಂದಿನಾಪತ್ತು ಮರೆತೆ |
ಇಂದು ಮಾಯದಿ ಬೆರೆತೆ ||
ಒಂದುಗೂಡಿದವು ಆಗಾ |
ಮುಂದಿನರುಹಿಲ್ಲಾ || ೧ ||

ಹಗಲು ಅಶನದ ಕೃತ್ಯ |
ಇರುಳು ನಿದ್ರೆಯೆ ಮಬ್ಬು ||
ವಿಗಡ ಕಾಮನ ತಡೆ |
ತಗಲು ಬಿತ್ತೋ ರಂಗಾ || ೨ ||

ಅತ್ತಿತ್ತೆ ಸುತ್ತುವನಕ |
ಹೊತ್ತು ಹೋಯಿತು ಯಮನ ||

ಮುಕ್ತಿಗೆ ಬಿದ್ದಾಗೆ |
ಮತ್ತಾರಿಲ್ಲೊ ಸ್ವಾಮಿ || ೩ ||

ಅಜ್ಞಾನೆಂಬ ಅಹಿ ಕಚ್ಚಿ – |
ಯಜ್ಞೇಶಾ ನಿನ್ನಂಘ್ರಿ ||
ಸಂಜ್ಞಾವಿಲ್ಲದೆ ದುಃಖ- |
ಮಗ್ನನಾದೆನಲ್ಲೊ || ೪ ||

ಶ್ರೀಪ್ರಸನ್ವೆಂಕಟೇಶಾ |
ತಾಪತ್ರಯ ವಿನಾಶಾ ||
ನೀ ಪಾಲಿಸಯ್ಯ ವಿಶ್ವ- |
ವ್ಯಾಪಕ ಸ್ವಾಮಿ || ೫ ||

## ಕರ್ತಾ ಕೃಷ್ಣಯ್ಯ ನೀ ಬಾರಯ್ಯಾ

ರಾಗ–ಘಂಟಾರವ (ಮಧುಮಾದ ಸಾರಂಗ) ತಾಳ–ಆದಿ (ದಾದರಾ)

ಕರ್ತಾ ಕೃಷ್ಣಯ್ಯಾ ನೀ ಬಾರಯ್ಯಾ ಎ– |
ನ್ನಾರ್ತ ಧ್ವನಿಗೊಲಿದು ಬಾರಯ್ಯಾ || ಪ ||

ಸುಗುಣದ ಖಣಿಯೇ ನೀ ಬಾರಯ್ಯಾ ಸ– |
ಮ್ಮಘವನೋಡಿಸಲು ಬಾರಯ್ಯಾ ||
ಢಗೆಯೇರಿತು ತಾಪಾ ಬಾರಯ್ಯ ಸುಧಾ– |
ಮುಗುಳ್ನಗೆ ಮಳೆಗರೆಯೆ ಬಾರಯ್ಯಾ || ೧ ||

ವೈರವರ್ಗದಿ ನೊಂದೆ ಬಾರಯ್ಯಾ ಮ– |
ತ್ತಾರು ಗೆಣೆಯರಿಲ್ಲಾ ಬಾರಯ್ಯಾ ||
ಸೇರಿದೆ ನಿನ್ನ ಕರುಣೆ ಬಾರಯ್ಯಾ ಒಳ್ಳೆ– |
ದಾರಿಯ ತೋರಲು ಬಾರಯ್ಯಾ || ೨ ||

ವೈರಾಗ್ಯ ಭಾಗ್ಯಕೊಡೆ ಬಾರಯ್ಯಾ ಜ್ಞಾ- |
ನಾರೋಗ್ಯದ ಭೇಷಜಾ ಬಾರಯ್ಯಾ ||
ಜಾರುತದಾಯು ಬೇಗಬಾರಯ್ಯಾ ಉ- |
ದಾರಿ ಪ್ರಸನ್ವೆಂಕಟ ಬಾರಯ್ಯಾ || ೩ ||

## ರಾಮ ರಾಮಾ ಸೀತಾರಾಮಾ

ರಾಗ-ಸಾರಂಗ ತಾಳ-ಝಂಪಾ (ದೀಪಚಂದಿ)

ರಾಮರಾಮಾ ಸೀತಾ- |
ರಾಮಾ ರಘುರಾಮಾ || ಪ ||

ರಾಮರಾಮ ರಘುನಂದನ ತೋಷನ |
ಆಮಿಷ ಪಾದಾಂಬುಜ ಪಾವನ ||
ನಾಮವಿಮಲ ಕಮಲಾಯತಲೋಚನ |
ಭೂಮಿಜಾರಮಣ ಸದಾ ಶುಭಮಹಿಮನೆ || ೧ ||

ದಂಡ ಕುಖರ್‌ಹರವಂದಿತ ಸುಜಟಾ |
ಮಂಡಿತ ಮೌಳಿ ಮುನೀಂದ್ರಕರಾರ್ಚಿತ ||
ಚಂದಕುಲೆಶಾ ಖಳ ನಿಶಾಚರ |
ದಂಡಿನ ವರ ಕೋದಂಡವಿದಾರಿ || ೨ ||

ವಾರಿದ ಶಾಮ ದಯಾಂಬುಧಿ ಭಕ್ತ ಸ- |
ಮೀರಜ ಸೇವ್ಯ ವಿಭೀಷಣ ವರದಸು- ||
ಸ್ಮೇರ ವದನ ಸಾಮ್ರಾಜ್ಯ ಪರಾಯಣ |
ಭೂರಿ ಪ್ರಸನ್ವೇಂಕಟ ಕೃಷ್ಣ ನಮೋ || ೩ ||

# ಸಖ್ಯವಿರಬೇಕು ಹರಿಭಕ್ತ ಜನಕೆ
## ( ಸಖ್ಯಭಕ್ತಿ )

ರಾಗ–ಸಾರಂಗ ಅಥವಾ ಬಿಲಹರಿ (ಮಾಲಕಂಸ) ತಾಳ–ಝಂಪೆ (ಝುಪ್)

ಸಖ್ಯವಿರಬೇಕು ಹರಿಭಕ್ತಜನಕೆ
ಮುಕ್ತಿದಾಯಕ ಪಾರ್ಥಸಖನ ಪಾದಾಬ್ಜದಲಿ || ಪ ||

ಅನಾದ್ಯನಂತ ಕಾಲಕ್ಕು ಸಾಯುಜ್ಯಸಖ
ಅನಂತ ಜೀವರಿಗೆ ಬಿಂಬರೂಪ
ತಾನೆ ಜೀವರಿಗನ್ನಪಾನಿತ್ತು ಪಾಲಿಸುವ
ಪ್ರಾಣೇಶ ಹೃದ್ಗುಹ ಪ್ರಾಣಪ್ರಿಯನ || ೧ ||

ಶ್ರೇಯಸವನೀವ ಪ್ರತಿ ಶ್ರೇಯಸದ ಬಯಕೆಲ್ಲ ನೀ–
ಶ್ರೇಯಸವನೀವ ಔದಾರ್ಯಗುಣದಿ
ಮಾಯುರ್ದಾರಿದ್ರ್ಯದ್ಯವಿದ್ಯತವೋಭಾನು
ವಾಯುಸಖ ಜ್ಞಾನಿಜನಪ್ರಿಯ ಸಖನೊಳು || ೨ ||

ಕ್ಷುತ್ತೃಷೆ ಭಯಾಂತ ಸರ್ವತ್ರ ಸಂರಕ್ಷಕ ಷಟ್–
ಶತ್ರುಸಂಹಾರಿ ಪರಾತ್ಪರಸಖ
ವೇತ್ತೃಜನಧೇನು ವೇದೋಪನಿಷದ್ವೇದ್ಯ
ಮಿತ್ರಕೋಟಿ ಭ್ರಾಜಿತಗಾತ್ರ ಹರಿಯ || ೩ ||

ಕರುಣಾರ್ಣವನು ಶರಣಸುರವೃಕ್ಷ ಸುಖವಾರ್ಧಿ
ದುರಿತಭವದೂರ ನಿರ್ದೋಷ ಗುಣದಿ
ಸುರಮುನಿನಿಕರ ಸೇವ್ಯ ಶಾಶ್ವದೇಕೋ ಭವ್ಯ–
ವರ ಸಹಸ್ರಾನಂತ ವಿಗ್ರಹನೊಳು || ೪ ||

ಪಾರ್ಥಸಖ ಗೋಪವಧು ಗೋತ್ರಸಖ ಸ್ತ್ರೀಪುತ್ರ
ಮಿತ್ರ ದೇಹೇಂದ್ರಿಯಾತ್ಮಪ್ರಿಯ ಕೃಷ್ಣ
ಮಿತ್ರವರನೊಬ್ಬ ಸರ್ವತ್ರ ನಾರಾಯಣಾ–
ನ್ಯತ್ರ ಸ್ನೇಹವ ತ್ಯಜಿಸಿ ಶ್ರೀಪ್ರಸನ್ನವೆಂಕಟನ || ೫ ||

## ಔಪಾಸನವ ಮಾಡು ದಾಸ ನಾನೆಂದು
(ಉಪಾಸನಾಭಕ್ತಿ)

ರಾಗ–ಕಲ್ಯಾಣಿ ತಾಳ–ಝಂಪೆ

ಔಪಾಸನವ ಮಾಡು ದಾಸ ನಾನೆಂದು
ಶ್ರೀಪತಿದಾಸ ಧರ್ಮವೇ ಮೋಕ್ಷವೆಂತೆಂದು ‖ ಪ ‖

ವನಿತೆ ಲಕುಮಿಯು ದಾಸಿ ಮುಕ್ತಾಮುಕ್ತ
ಗಣವೆಲ್ಲ ಹರಿದಾಸರು
ಹನುಮಂತ್ ಸ್ವಾಮಿಯು ರಾಮದಾಸತ್ವದ ಭಾಗ್ಯ–
ವನು ಹೊಂದಿ ವಿರಂಚಿ ಪದವಿಯ ಪಡೆದನು ‖ ೧ ‖

ಅನಾದ್ಯನಂತಕಾಲಾ ಸಂಸ್ಕೃತಿಯಲ್ಲಿ
ಆನಂದವನು ಮುಕ್ತಿಲಿ–
ನೀನೆಂದಿಗೂ ಸ್ವಾಮಿ ನಾನು ಭೃತ್ಯರಭೃತ್ಯ
ಅನಿಮೇಷರೆಲ್ಲ ನಿನ್ನೊಳಿಗದವರೆಂದು ‖ ೨ ‖

ದಾರಾಪತ್ಯಾದಿ ಬಳಗ ದಾಸಿದಾಸರು
ನಾರಾಯಣ ದೇವನಾ–
ವಾರವರ ಯೋಗ್ಯತೆ ಸಾರ ಸಂಬಳ ಸೇವೆ
ಮೀರದೀವ ದೀನೋದ್ಧಾರ ಕೃಷ್ಣನೆಂದು ‖ ೩ ‖

ಕರಣತ್ರಯಗಳಿಂದ ನಿರಂತರ
ಮರೆಯೂಳಿಗವ ಮಾಡಿ
ಸಿರಿದಾರಿದ್ರ್ಯತೆಗಳಿಗ್ಹಿಗ್ಗಿ ಕುಗ್ಗದೆ
ಪರಮ ಭಕುತಿಭಾಗ್ಯ ದೊರಕಿದುಲ್ಲಾಸದಿ ‖ ೪ ‖

ದುರಿತಕೋಟಿಗಂಜದೆ ಸಾಧುನಿಕರ
ಹರಿಯ ಸೇವೆಯ ಬಿಡದೆ
ವರವಿರತಿ ಜ್ಞಾನಭಕ್ತಿಲಿ ಪ್ರಸನ್ವೆಂಕಟ
ಹರಿಕೊಟ್ಟಷ್ಟೆ ಪರಮ ಸಂಬಳಸಾಕೆಂದು ‖ ೫ ‖

## ಸತತ ಕಲ್ಯಾಣ ಅಚ್ಯುತ ಭಟರಿಗೆ

ರಾಗ- ಕಾಂಬೋದಿ (ಅಹಿರ್ ಭೈರವ) ತಾಳ–ಝಂಪಾ (ಝಪ್)

ಸತತ ಕಲ್ಯಾಣ ಅಚ್ಯುತ ಭಟರಿಗೆ ||
ರತಿಪತಿ ಪಿತನಂಘ್ರಿರತ ಮಹಾತ್ಮರಿಗೆ || ಪ ||

ಆದಿವ್ಯಾಧಿಗಳಿಲ್ಲ ಅಶುಭವಾರ್ತೆಗಳಿಲ್ಲ |
ಕ್ರೋಧ ನೃಪಭಯವಿಲ್ಲ ಕಾಕುಮತಿಯಿಲ್ಲ ||
ಖೇದಮೋದಗಳಿಲ್ಲ ಖಿನ್ನತೆಯು ಮುಖಕಿಲ್ಲ |
ಶ್ರೀಧವನ ನವಭಕುತಿಶೀಲ ಜೀವರಿಗೆ || ೧ ||

ಅರಿಗಳೇ ಸಖರಕ್ಕು ಅತಿವಿಷವಮೃತವಕ್ಕು |
ಉರಗ ಪೂಮಾಲ್ಯಕ್ಕು ಉರಿತಂಣಗಕ್ಕು ||
ಶರಧಿ ಗೋಷ್ಪದವಕ್ಕು ಶರಘಾತ ಬೆಂಡಕ್ಕು |
ನರಹರಿಯ ನಾಮವನು ನಂಬಿ ತುತಿಪರಿಗೆ || ೨ ||

ಪಾಪತಾಪಗಳಿಗೋಟ ಪಿರಿದು ಬಹ ಎಡರ್ಗೋಟ |
ಆಪತ್ತುಗಳಿಗೋಟ ಆಲಸ್ಯ ಕೋಟ ||
ಕೋಪದಾರಿದ್ರ್ಯಕೋಟ ಕಲಿವ್ಯಸನಮದಕೋಟ |
ಶ್ರೀಪ್ರಸನ್ವೆಂಕಟನ ಭಜಿಪ ಭಕ್ತರಿಗೆ || ೩ ||

## ಬೇಸರದೆಂದೂ ಸದಾಶಿವನೆನ್ನಿ

ರಾಗ– ವಸಂತ (ಬಸಂತ) ತಾಳ– ಆದಿ (ತೀನ್‌ತಾಲ)

ಬೇಸರದೆಂದೂ ಸದಾಶಿವನೆನ್ನಿ ।
ಕಾಶಿಯ ಪ್ರಭು ವಿಶ್ವೇಶ್ವರನೆನ್ನಿ ॥ ಪ ॥

ನಂದಿವಾಹನ ಆನಂದಯೆನ್ನಿ ।
ಸುಂದರ ಗಣಪನ ತಂದೆಯು ಎನ್ನಿ ॥ ೧ ॥

ನಂಬೆ ಭವಾಂಬುಧಿ ಅಂಬಿಗನೆನ್ನಿ ।
ಅಂಬಿಕೆಯರಸು ತ್ರಿಯಂಬಕನೆನ್ನಿ ॥ ೨ ॥

ಕರ್ಪೂರಭಾಂಗ ಕಂದರ್ಪಹರ ಎನ್ನಿ ।
ಸರ್ಪಭೂಷಣಗೆ ಸುಖಾರ್ಪಣವೆನ್ನಿ ॥ ೩ ॥

ಬೇಡಿದ ಭಾಗ್ಯವೀಡಾಡುವನೆನ್ನಿ ।
ಬೇಡನ ಭಕುತಿಗೆ ಕೂಡಿದನೆನ್ನಿ ॥ ೪ ॥

ಶಂಭು ಗಜದ ಚರ್ಮಾಂಬರನೆನ್ನಿ ।
ಸಾಂಬ ಸುಗುಣ ಕರುಣಾಂಕನೆನ್ನಿ ॥ ೫ ॥

ಎಂದಿಗೂ ಭಾವಿಕ ಮಂದಿರನೆನ್ನಿ ।
ಇಂದುಶೇಖರ ನೀಲಕಂಧರನೆನ್ನಿ ॥ ೬ ॥

ದುರ್ದನುಜಾಸುರ ಮರ್ದಕನೆನ್ನಿ ಕ– ।
ಪರ್ದಿ ಕಪಾಲಿತೇ ವರ್ಧಕನೆನ್ನಿ ॥ ೭ ॥

ಶರಣು ಸುರಾರ್ಚಿತ ಚರಣನೆ ಎನ್ನಿ ।
ಪರಮ ಭಕ್ತರನು ಪೊರೆಯುವನೆನ್ನಿ ॥ ೮ ॥

ತ್ರಿಪುರಾಂತಕ ನಿಷ್ಕಪಟನು ಎನ್ನಿ ।
ಅಪಮೃತಿಹರ ಖಳರಪಹರನೆನ್ನಿ ॥ ೯ ॥

ದಕ್ಷನ ಯಜ್ಞ ವೀಕ್ಷಕನೆನ್ನಿ ।
ಪಕ್ಷಿಗಮನಭಟ ರಕ್ಷಕನೆನ್ನಿ ‖ ೧೦ ‖

ಈ ಪರಿ ನೆನೆದರೆ ಪಾಪ ದೂರೆನ್ನಿ ।
ಶ್ರೀಪ್ರಸನ್ವೆಂಕಟೇಶಗೆ ಪ್ರಿಯನೆನ್ನಿ ‖ ೧೧ ‖

## ಹಕ್ಕೀಯ ಹೆಗಲೇರಿ ಬಂದಾವಗೆ

ರಾಗ-ಕನ್ನಡ ಕಾಂಬೋದಿ (ಕಲಾವತಿ) ತಾಳ-ಆದಿ (ತೀನ್ ತಾಲ)

ಹಕ್ಕೀಯ ಹೆಗಲೇರಿ ಬಂದಾವಗೆ ನೋ- ।
ಡಕ್ಕ ಮನಸೋತೆ ನಾನವಗೆ ‖ ಪ ‖

ಸತ್ರಾಜಿತನ ಮಗಳೆತ್ತಿದ ಉ- ।
ನ್ಮತ್ತ ನರಕದೊಳು ಕಾದಿದ ‖
ಮತ್ತೆ ಕೆಡಹಿದ ಅವನಂಗವ ಸತಿ- ।
ಗಿತ್ತನು ತಾ ಆಲಿಂಗನವ ‖ ೧ ‖

ಹದಿನಾರು ಸಾವಿರ ನಾರಿಯರ ಸೆರೆ ।
ಮುದದಿಂದ ಬಿಡಿಸಿ ಮನೋಹರ ‖
ಅದಿತೀಯ ಕುಂಡಲ ಕಳಿಸಿದ ಹರ ।
ವಿಧಿಸುರ ನೃಪರನು ಸಲಹೀದ ‖ ೨ ‖

ಉತ್ತಮಾ ಪ್ರಾಗ್ಜ್ಯೋತಿಷಾ ಪುರವಾ ಭಗ- ।
ದತ್ತಗೆ ಕೊಟ್ಟವರಾಭಯವ ‖
ಕರ್ತ ಕೃಷ್ಣಯ್ಯನ ನಂಬೀದೆ ಶ್ರೀ ।
ಮೂರ್ತಿಯ ಪಾದವ ಹೊಂದೀದೆ ‖ ೩ ‖

ನರಕ ಚತುರ್ದಶಿ ಪರ್ವದ ದಿನ |
ಹರುಷಾದಿ ಪ್ರಕಟಾದನು ದೇವ ||
ಶರಣಾಗತ ಜನವತ್ಸಲಾ ರಂಗ !
ಪರಮ ಭಾಗವತರ ಪರಿಪಾಲಾ || ೪ ||

ಹೊಗಳಿ ಕೃಷ್ಣಯ್ಯನ ಮಹಿಮೆಯಾ ಮುಕ್ತಿ- |
ನಗರದ ಅರಸನ ಕೀರ್ತಿಯಾ ||
ಜಗದೀಶ ಪ್ರಸನ್ವೆಂಕಟೇಶನು ಭಕ್ತ- |
ರಘುಹಾರಿ ರವಿಕೋಟಿ ಪ್ರಕಾಶನು || ೫ ||

## ಹನುಮಾ ನಮ್ಮ ತಾಯಿ-ತಂದಿ

ರಾಗ-ಮಾರವಿ (ಪೂರ್ವಿ) ತಾಳ-ಆದಿ (ತೀನ್ ತಾಲ)

ಹನುಮಾ ನಮ್ಮ ತಾಯಿ ತಂದಿ |
ಭೀಮಾ ನಮ್ಮ ಬಂಧು ಬಳಗಾ |
ಆನಂದತೀರ್ಥರೇ ನಮ್ಮ ಗತಿಗೋತ್ರರು || ಪ ||

ತಾಯಿತಂದಿ ಹಸುಳರಿಗೆ ಸಾಯುವಿತ್ತು ಸಾಕುವಂತೆ |
ಆಯಾಸವಿಲ್ಲದೆ ಸಂಜೀವನವಾ ತಂದು ||
ಘಾಯಗೊಂಡ ಕಪಿಗಳನ್ನೂ- |
ಪಾಯದಿಂದ ಪೊರೆದ ಶ್ರೀರಘು- |
ರಾಮನಂಘ್ರಿಗಳೇ ಸಾಕ್ಷಿ ತ್ರೇತಾಯುಗದಿ || ೧ ||

ಬಂಧುಬಳಗದಂತೆ ಆಪದ್- |
ಬಾಂಧವನಾಗಿ ಪಾರ್ಥನಿಗೆ |
ಬಂದ ಬಂದ ಭಯಂಗಳ ಪರಿಹರಿಸಿ ||

ಅಂಧಕಜಾತರ ಕೊಂದು |
ಅಂದೇ ಕೃಷ್ಣಾರ್ಪಣವೆಂದೆದುಕು- |
ಲೇಂದ್ರನಂಘ್ರಿಗಳೇ ಸಾಕ್ಷಿ ದ್ವಾಪರಾಂತ್ಯದಿ ‖ ೨ ‖

ಗತಿಗೋತ್ರರಂತೆ ಸಾಧು- |
ತತಿಗಳಿಗೆ ಸುಜ್ಞಾನವಿತ್ತು |
ಮತಿಗೆಡಿಸಿದ ಇಪ್ಪತ್ತೊಂದು ಕುಭಾಷ್ಯಂಗಳ ‖
ಗತಿಗೆಡಿಸಿ ಸದ್ವೈಷ್ಣವರಿಗೆ ಸ- |
ದ್ಗತಿಯ ತೋರಿದ ಪ್ರಸನ್ವೇಂಕಟ |
ಪ್ರತಿವ್ಯಾಸನಂಘ್ರಿಗಳೇ ಸಾಕ್ಷಿ ಕಲಿಯುಗದಿ ‖ ೩ ‖

## ದೇವ ದೇವೇಶ ವೆಂಕಟೇಶ

ರಾಗ–ಬಹರಿ (ಬಹಾರ) ತಾಳ–ಆದಿ (ತೀನ್‌ತಾಲ)

ದೇವ ದೇವೇಶ ವೆಂಕಟೇಶ | ಶ್ರೀವಿಧಾತಾವಂದ್ಯ |
ಭೂವೈಕುಂಠೇಶ ‖ ಪ ‖

ಕಾಮಿತಫಲದಾತ ಜಗದಾಧ್ಯಕ್ಷ |
ಸಾಮಗಾನಪ್ರಿಯ ಸುರಸತ್ಪಕ್ಷಾ ‖
ಶ್ರೀಮಾವಧೂಮನೋಹರ ತ್ರಿಧಾಮಶ್ರೀ |
ರಾಮಸಂಪ್ರೇಮಾಬ್ಧಿ ಕೋಮಲ ಕುಕ್ಷಾ ‖ ೧ ‖

ರಾಕೇಂದು ರವಿಕೋಟಿ ಸುತೇಜ ಸ್ವಾಮಿ |
ನಾಕಪಾರ್ಜಿತ ಪದಾಂಭೋಜಾ ‖
ವ್ಯಾಕೀರ್ಣಾನೇಕಜಾಂಡಾಂಕಿತ ವ್ಯಾಕೃತ |
ಶ್ರೀಕಾರಾ ಸಾಕಾರಾ ಲೋಕೇಕಪೂಜ್ಯಾ ‖ ೨ ‖

ಅನಂತಾ ಗುಣಪರಿಪೂರ್ಣ ಸ್ವಾಮಿ |
ಆನತಜನ ಬುಧಾಭರಣ ||
ಧೇನೂಗಿರಿನಾಥ ದಾಸಿಪ್ರಸನ್ವೆಂಕಟ |
ಜಾನಾನಂದಾ ನಿತ್ಯಾ ತೇ ನಮೋ ಕರುಣಿ || ೩ ||

## ಕೃಷ್ಣಲೀಲಾನಂದ ನೋಡಿರೈ

ರಾಗ–ತೋಡಿ (ಭೈರವಿ) ತಾಳ–ಝಂಪಾ (ಝಪ್)

ಕೃಷ್ಣಲೀಲಾನಂದ ನೋಡಿರೈ ಶ್ರೀ– |
ಕೃಷ್ಣ ಕೃತಿಯಾ ಛಂದ ಪಾಡಿರೈ ||
ಕೃಷ್ಣಗೋಪೇರಂದಾ ನೋಡಿರೈ ಬಾಲ- |
ಕೃಷ್ಣ ಮುಕುಂದನಾ ಪಾಡಿರೈ || ಪ ||

ಬಾಲರ ವಿಭು ಬೆಣ್ಣೆ ಮಸರಾ ಸವಿದು ಗೋಪ |
ಬಾಲೆರ ವಿಭಾಡಿಸಿ ತಾ ಮೆಲುವಾ ||
ಬಾಲರವಿಭಾನಖತೇಜದೊಳಾಡುವಾ |
ಬಾಲರ ವಿಭವನು ನೋಡಿರೈ || ೧ ||

ಸಮುಕಾಲದಲಿ ಕಾರಣನಾಗಿ ಜಗಕೆ ತಾ |
ಸಮುವಯ ಗೋವರ್ಗೆಳೆಯನಾದನು ||
ಸಮುವಿಲ್ಲೆಶೋದೆನಂದರ ಭಾಗ್ಯಮಗನಾದಾ |
ಶಾಮುವ್ಯೈಯವನ ಮುಖ ನೋಡಿರೈ || ೨ ||

ಕಣ್ಣಿಲ್ಯಾಲಿಸದೆ ವಿಶ್ವ ಹೊರೆವ ವತ್ಸ |
ಕಣ್ಣಿಲೊಲಿದು ಕಟ್ಟಿಸಿಕೊಂಡನು ||
ಕಣ್ಣಿಲ್ಯಾಲಿಯನುಳ್ಳ ಪ್ರಸನ್ವೆಂಕಟೇಶನ |
ಕಣ್ಣಿಲಿ ಲಯವಿಟ್ಟು ನೋಡಿರೈ || ೩ ||

## ಕಾಯೋ ಗೋವಿಂದಾ

**ರಾಗ–ಭೈರವಿ (ಕಾಫಿ)** **ತಾಳ–ಅಟ್ಟ (ದೀಪಚಂದಿ)**

ಕಾಯೋ ಗೋವಿಂದಾ |
ಕಾಯೋ ಮುಕುಂದಾ |
ಮಾಯದ ತಡಿಯಾ | ತಪ್ಪಿಸೋ ನಿತ್ಯಾನಂದಾ ‖ ಪ ‖

ನಾನಾ ಯೋನಿಯ ಸುತ್ತಿ |
ನೆಲೆಗಾಣದಂತಾದೆ |
ನೀನೊಲಿದಿಂದೀ ಜನ್ಮವ ಪಡೆದೇ ‖
ಜ್ಞಾನಹೊಂದಲಿಲ್ಲಾ |
ಧರ್ಮದಾಚರಣಿಲ್ಲಾ |
ಏನು ಗತಿಯೋ ನನಗೆ ಮುಂದೆ ಸಿರಿನಲ್ಲಾ ‖ ೧ ‖

ಮರ್ಕಟಗೆ ಹೊನ್ನಕೊಡ ದೊರೆದಂತಾಯಿತೋ |
ಮೂರ್ಖವೃತ್ತಿಯಲ್ಲಿ ಆಯುಷ್ಯ ಹೋದಿತೋ ‖
ನರಕಸಾಧನ ಬಗೆ ಘನವಾಯಿತೋ ಪುಣ್ಯ ಸಂ– |
ಪರ್ಕ ಕಾಣೆನ್ನೈ ಕರುಣಿಗಳರಸೆ ಕಾಯೋ ‖ ೨ ‖

ಎನ್ನ ತಪ್ಪಿನ ಹೊಳೆ ಒಳಕೊಂಬುದು ಒಂದೇ |
ನಿನ್ನಯ ದಯದ ಶರಧಿಯಲ್ಲವೇ ‖
ಅನ್ಯ ಮಾರ್ಗವು ಶಿಲುಕದು ತಂದೆಯೇ ಪ್ರ– |
ಸನ್ವೆಂಕಟಪತಿ ಹರಿ ದೀನಬಂಧೂ ‖ ೩ ‖

## ಅಳದಿರೊ ಸುಮ್ಮನಿರಮ್ಮಾ ನೀ

ರಾಗ– ಕಾಫಿ ತಾಳ– ಝಂಪೆ (ದೀಪಚಂದಿ)

ಅಳದಿರೊ ಸುಮ್ಮನಿರಮ್ಮಾ ನೀ ।
ಅಳದಿರೊ ಬವ್ವ ಬಂದಾವಮ್ಮಾ ಕೃಷ್ಣಮ್ಮಾ ॥ ಪ ॥

ನಾಲ್ಕು ಮೊಗವುಳ್ಳ ಬವ್ವ ಹದಿ– ।
ನಾಲ್ಕು ಮೊಗವ ಜೋಳಿಯಲಿಟ್ಟಾ ಬವ್ವ ।
ಫೋಳಿಟ್ಟೆಸುತ್ತಿದೆ ಬವ್ವ ನಿನ್ನ ।
ಕಾಲು ಕಂಡರೆ ಕಚ್ಚಿಕೊಂಡೊಯ್ವಾ ಬವ್ವ ॥ ೧ ॥

ಗಗನ ತುಂಬ್ಯಾಡುವ ಬವ್ವ ಪ್ರಾ- ।
ಣಿಗಳ ದೇಹವ ಪೊಕ್ಕು ಚೇಷ್ಟಿಪಾ ಬವ್ವ ॥
ಜಗವನಲ್ಲಾಡಿಪ ಬವ್ವ ನಿನ್ನ ।
ಮೊಗವರಿತು ದೂರಿಲಿ ನಿಂತಿಪ್ಪ ಬವ್ವ ॥ ೨ ॥

ಮೊಗವೈದು ಪಣೆಗಣ್ಣ ಬವ್ವ ಪುಲಿ– ।
ದೊಗಲು ಕೆಂಜೆಡೆ ರುಂಡಮಾಲಿಯು ಬವ್ವ ॥
ಬಗೆಯಿಂದಾ ಪೆಣ್ಣೆತ್ತಿ ಬವ್ವ ತಾ ।
ಸೊಗಸೀಲೆ ರಾಮರಾಮೆನುತಿದೆ ಬವ್ವ ॥ ೩ ॥

ಮೈಯಲ್ಲಾ ಕಣ್ಣೀನ ಬವ್ವ ತನ್ನ ।
ಕೈಯಲಿ ವಜ್ರವ ಬೀಸುವ ಬವ್ವ ॥
ಉಯ್ಯಾಲಾಡುತಲಿದೆ ಬವ್ವ ನಿನ್ನ ।
ಒಯ್ವೆನೆನುತ ಬಂತು ಹಲ ಕಾಲ ಬವ್ವ ॥ ೪ ॥

ಒಂದಲ್ಲ ನೂರಲ್ಲ ಬವ್ವ ನಿನ್ನ ।
ಮುಂದಿರಾ ಸುತ್ತುತಾವಾಸಂತ ಬವ್ವ ॥
ಪೊಂದೊಟ್ಟಿಲೊಳು ನಿದ್ರೈಗೈಯೆ ಎನ್ನ ।
ತಂದೆ ಪ್ರಸನ್ವೇಂಕಟ ಸಿರಿಧೊರೆಯೇ ॥ ೫ ॥

## ಸುಳಿದನ್ಯಾರೆ ಈಗ ಸುಳಿದನ್ಯಾರೆ

ರಾಗ–ಮಧುಮಾಧವಿ (ವೃಂದಾವನಿ ಸಾರಂಗ) ತಾಳ–ಆದಿ (ತೀನ್ ತಾಲ)

ಸುಳಿದನ್ಯಾರೆ ಈಗ ಸುಳಿದನ್ಯಾರೆ ।
ಕೆಳದಿ ಎನ್ನುಪ್ಪರಿಗೆಯ ಮುಂದೆ ॥
ಹೊಳೆವ ಹೊಂಬಕ್ಕಿಯ ಮ್ಯಾಲೆ।
ಥಳಥಳಿಪ ಮಿಂಚಿನಂತೆ ॥ ಪ ॥

ಎಸೆವ ಮಣಿ ಕನಕಾಭರಣಿಟ್ಟು ।
ನಸುನಗೆ ಬಳಗವ್ಹೈಸರಿಸಿ ॥
ಬಿಸಜಾಕ್ಷಿಯಳೋರ್ವಳ ಕೂಡ ।
ಹೊಸ ಪರಿ ಸರಸವಾಡುತಲಿ ॥ ೧ ॥

ಮುಂದುಘ್ಘಡಿಪ ಸುರಸಂದೋಹ ।
ಹಿಂದಕ್ಕೆಳದೀ ಮುನಿಸಮ್ಮೋಹ ॥
ಅಂಗದಿ ಮುಂಗದಿರವ ವಾದ್ಯ ।
ಸಂದಣೀಯ ಸೊಬಗೀನಲ್ಲಿ ॥ ೨ ॥

ಎನ್ನ ಮನದಿ ನೇಹವ ಬೀರಿ ।
ಇನ್ಯಾಕೆ ದೂರ ನೋಡಿದನೆ ॥
ಮನ್ನೀಸ್ಯವನ ತಾರೆ ಶ್ರೀಪ್ರ– ।
ಸನ್ನವೆಂಕಟ ವರದನ ಬೇಗ ॥ ೩ ॥

## ಹರಿ ನೀ ವಿಡಿದ ಕಲ್ಲುವೇ ರತುನಾ

ರಾಗ-ಮಾರವಿ (ಭೀಮಪಲಾಸ) ತಾಳ-ತ್ರಿವಿಡಿ (ತೀನ್ ತಾಲ)

ಹರಿ ನೀ ವಿಡಿದ ಕಲ್ಲುವೇ ರತುನಾ ‖ ಪ ‖

ಹರಿ ನಿನ್ನಡಿಗಲ್ಲದವನೇ ಯವನಾ ‖
ಹರಿ ನೀನೊಲಿದ ಕಪಿರಾಜ ವಿಧಿಯು ।
ಹರಿ ನೀ ಗೆಲಿಸೆ ಪಾರ್ಥನಿಗೆ ಗೆಲುವು ‖
ಹರಿ ನೀ ಮುನಿದ ಕೌರವರಿಗೆ ಅಳಿವು ‖ ೧ ‖

ಹರಿ ನೀ ಮೆಚ್ಚಿದ ಅರ್ಭಕರು ಆರ್ಯರು ।
ಹರಿ ನೀ ಮೆಚ್ಚದಾರ್ಯ ಕಿರಿಯರು ‖
ಹರಿ ನಿನ್ನುಚ್ಚನ ಗೈವರು ಮಾನ್ಯರು ।
ಹರಿ ನಿನ್ನೆಚ್ಚರಿಲ್ಲದ ಜನರುಚ್ಚರು ‖ ೨ ‖

ಹರಿ ನೀ ಕನಕಗಿರಿ ಗಣಿಪತಿಯೆನಿಪೆ ।
ಹರಿ ನೀ ತೃಣವೆಚ್ಚಾ ಮಾಡುತಲಿಪ್ಪೆ ‖
ಹರಿ ನೀ ಘನಕೆ ಘನತರ ಸನ್ಮಹಿಮಾ ।
ಹರಿ ನೀ ಪ್ರಸನ್ವೆಂಕಟನ ಹೊರೆಯಮ್ಮಾ ‖ ೩ ‖

## ಎಂಥಾ ದಯವಂತನೋ

ರಾಗ-ಶಂಕರಾಭರಣ (ಹಮೀರ) ತಾಳ-ಅಟ (ಝುಪ್)

ಎಂಥಾ ದಯವಂತನೋ । ಲಕ್ಷುಮಿಕಾಂತಾ ।
ಎಂಥಾ ದಯವಂತನೋ ‖ ಪ ‖

ಕರಿಜನ್ಮ ತಾಳ್ದರಸನು ನೀರೊಳಗೆ ನೆ- |
ಕ್ಕರಕೊಡ ಕಾದಿ ಮುಳುಗೇ ||
ಹರಿಹರಿಯೆಂದು ಹರಣವ ತೊರೆವಾಗ |
ಬರೆ ಮಂಡೆಯಲ್ಲಿ ಬಂದು ಭರದುದ್ಧರಿಸಿದೆ ||೧||

ಶೂಲಿಯ ಮತಿ ಕದ್ದು ವರಕೊಂಡು ಮಹಾಸುರ |
ಮೇಲೆ ಬೆಂಬತ್ತೆ ಶ್ರೀಲೋಲಾ ಕಾಲಕೆ ||
ಆಲೋಚಿಸಿ ಬಾಲೆಯಾಗಿ ಖಳನ ಜ್ವಲಿಸಿ ಕ- |
ಪಾಲಿಯ ಪಾಲಿಸಿದೆ ಸುರಶಾರ್ದೂಲಾ ||೨||

ನಿನ್ನನುಜೆಯಳ ಮಾನವಾ ಕೊಂಡೆನೆಂದು |
ಕುನ್ನಿ ಕೌರವನೆಳೆಯೆ ಕೃಷ್ಣನಾ ಪ್ರ- ||
ಸನ್ನವೆಂಕಟೇಶ ನಿನ್ನ ಕೂಗಿ ಕರೆಯೆ |
ಮನ್ನಿಸಿ ಬಣ್ಣಬಣ್ಣದ ವಸ್ತ್ರವನುಡಿಸಿದೆ ||೩||

## ಬಾಲನ ಮ್ಯಾಲೆ ನಿನ್ನ ಮೋಹವಮ್ಮಾ

ರಾಗ- ತೋಡಿ (ಭೈರವಿ) ತಾಳ- ಆದಿ (ತೀನ್ ತಾಲ)

ಬಾಲನ ಮ್ಯಾಲೆ ನಿನ್ನ ಮೋಹವಮ್ಮಾ |
ನಾವು ಹೇಳಿದ ಮಾತು ನೀ ಕೇಳೆಯಮ್ಮಾ ||ಪ||

ಬೆಣ್ಣೆಗಿಣ್ಣೆಂಬುವನಲ್ಲ ಎನ್ನಬ್ಯಾಡ ನಮ್ಮ |
ಬೆಣ್ಣೆ ಕದ್ದುಮೆದ್ದ ಕಟವಾಯಿ ನೋಡೆ ||
ಸಣ್ಣಗಿಣ್ಣವನಿವನಾದರೆ ಪರರ ಚೆಲುವ |
ಹೆಣ್ಣನೊಳಗಾಡುವನೆ ನಿನ್ನ ಕುವರ ||೧||

ಪುಟ್ಟಕಿಟ್ಟನೆಂಬುವ ಮಾತಾಡಬ್ಯಾಡೆ ನಮ್ಮ ।
ರಟ್ಟುಮಾಡುವ ಜನರೊಳು ನೋಡೆ ॥
ಸಿಟಗಿಟ್ಟಗೆ ಕೃಷ್ಣನಳಕನಮ್ಮಾ ।
ಬಹುಗಟ್ಟಿಗ ಬಾಲಕನತಿ ಧಿಟ್ಟನಮ್ಮಾ ॥ ೨ ॥

ಚಿಕ್ಕಗಿಕ್ಕವನೆಂಬುದು ರೂಢಿ ಕಾಣೆ ।
ನಮ್ಮ ಪಕ್ಕವ ಬಿಡನು ಬಾಲಕಾರ್ಯ ಘನನೆ ॥
ಅಕ್ಕೊ ಇಕ್ಕೊನೆಂಬುವನಕ್ಕಾ ಕಳ್ಳ ನಮ್ಮ ।
ಠಕ್ಕಿಸಿದ್ದೋಡುವ ಸಿಕ್ಕುವನಲ್ಲಾ ॥ ೩ ॥

ಕಕ್ಕುಲಾತಿ ತೋರೆ ನಮ್ಮ ಮನೆಗಳ ಪೊಕ್ಕು ಸಣ್ಣ ।
ಮಕ್ಕಳಾಟವಾಡದೆಮ್ಮ ನೋಡಿ ನಕ್ಕು ॥
ತಕ್ಕೈಸಿ ಓಡುವ ಮಹಾಮಾಯುಗಾರನಮ್ಮ ।
ದಕ್ಕಲೀಸ ಪತಿವ್ರತಧರ್ಮ ಜಾರ ಕೃಷ್ಣ ॥ ೪ ॥

ಕೂಸುಗೀಸು ಇನ್ನೇನನ್ನಬಾರದವಗೆ ಭವ ।
ಘಾಸೆಯ ತಪ್ಪಿಸುವ ಎಂದಿಗೆ ನಮಗೆ ॥
ಬ್ಯಾಸರಗೀಸರದೆ ನೆನೆವರ ಒಡೆಯಾ ಲಕು- ।
ಮೀಶ ಪ್ರಸನ್ವೆಂಕಟ ರಂಗಯ್ಯಾ ॥ ೫ ॥

## ಆರ ಬಾಲಕನೆ? ಜಾರನಿವ

ರಾಗ–ಕಾಫಿ ತಾಳ–ತ್ರಿಪುಟ (ತೀನ್ ತಾಲ)

ಆರ ಬಾಲಕನೆ ? ಜಾರನಿವ । ನಾರ ಬಾಲಕನೇ ॥ ಪ ॥

ಗುಂಡಿಗೆ ಬೆಣ್ಣೆ ಕದ್ದುಂಡು ಸ್ತ್ರೀಯರ ಕುಚ ।
ಪುಂಡರೀಕವಿಡಿದು ಭಂಡು ಮಾಡುತಲಿಹನೇ ॥ ೧ ॥

ನಿದ್ರಿಯ ಕಾಲಕೆ ಸದ್ದಿಲ್ಲದೆ ಬಂದು |
ಗದ್ದಮುದ್ದಡಪಿ ಮುದ್ದು ನೀಡುವನಿವನೆ || ೨ ||

ಅರ್ಥಿಲಿ ಬಾಲನೆಂದೆತ್ತಿಕೊಂಡರೇನಮ್ಮಾ |
ಅತ್ತೆಮಾವನ ಮುಂದೆ ಬತ್ತಲೆ ಮಾಡ್ವನಿವ || ೩ ||

ಬಲು ಮೋಹ ಬರುತಿದೆ ಎಳೆಯನ ಕಾಣುತ |
ಅಳುಕಾದೆ ಮುಡಿಯೇರಿ ಕಳೆವ ಕಂಚುಕನಿವ || ೪ ||

ಪುಸಿಯೇ ಅಳಲು ಅವಚಿದ ರಂಬಿಸಿ ಮ್ಯಾಲೆ |
ಪ್ರಸನ್ವೆಂಕಟ ಕೃಷ್ಣ ನಸುನಗುತಾನೆ ಇವ || ೫ ||

## ಮಹತಿಗೆ ಮಹತು ಶ್ರೀಹರಿಯ ನಾಮಾ

ರಾಗ-ಭೂಪಾಲ (ಬಾಗೇಶ್ರೀ) ತಾಳ-ಝಂಪಾ (ಝಪ್)

ಮಹತಿಗೆ ಮಹತು ಶ್ರೀಹರಿಯ ನಾಮಾ || ಪ ||

ಹಿಂದೊದಗಿದಘರಾಶಿ ಬೇಯ್ಸಿ ಬಿಸುಟುವ ನಾಮ |
ಮುಂದೆ ಬಹದುರಿತಕಡ್ಡಾದ ನಾಮ ||
ಮಂದಮತಿ ಕತ್ತಲೆಗೆ ಬಾಲಾರ್ಕಸಮ ನಾಮ |
ದಂದುಗದ ಬಳ್ಳಿಯನು ಹರಿವ ನಾಮ || ೧ ||

ಮುಕುತಿ ನಗರವ ತುಂಬಿಸುವ ಅಭಯಕರ ನಾಮ |
ಶಕುತರ ಮಾಲಿಕೆಗಭಯದ ನಾಮ ||
ಅಕಳಂಕ ದಾಸರಿಗೆ ಆದ್ಯಂತ ಗತಿನಾಮ
ಭಕುತರೆಡರಿನ ಗಿರಿಗೆ ವಜ್ರನಾಮ || ೨ ||

ಸರ್ವಶ್ರುತ ಮುನಿಗಳುಘ್ಘಡಿಸುತಿಹ ದಿವ್ಯನಾಮ ।
ಉರ್ವಿಯೊಳು ನಂಬಿದರ ಪೊರೆವ ನಾಮ ॥
ಸರ್ವಜ್ಞರಾಯರು ನಿರ್ವಚನಿಸುವ ನಾಮ ।
ಸರ್ವೇಶ ಪ್ರಸನ್ವೇಂಕಟೇಶನ ಶ್ರೀನಾಮ ॥ ೩ ॥

## ಆನೆ ಬಂತಾನೆ ಬಂತಾನೆ ಬಂತಮ್ಮ

ರಾಗ–ಸಾರಂಗ ಅಟತಾಳ (ಧುಮಾಳಿ)

ಆನೆ ಬಂತಾನೆ ಬಂತಾನೆ ಬಂತಮ್ಮ ।
ದಾನವಕದಳಿಯ ಕಾನನ ಮುರಿವ ॥ ಪ ॥

ಉಂಗುರಗೊರಳ ನೀಲಾಗಚಲ್ವಾನೆ ।
ಕಂಗಳಿಗ್ಹೊಳಿವ ವ್ಯಾಘ್ರಾಂಗುಳಿಯಾನೆ ॥
ಭಂಗಾರದಣುಘಂಟೆ ಶೃಂಗಾರದಾನೆ ।
ಮಂಗಳತಿಲಕದ ರಂಗನೆಂಬಾನೆ ॥ ೧ ॥

ವಲಿವಲಿದಾಡುವ ಎಳೆಮರಿಯಾನೆ ।
ಕೆಳದಿ ಗೋಪರೊಳು ಗೆಳೆತನದಾನೆ ॥
ಘಳಿಲುಘಳಿಲುರವದಿ ನಲಿದಾಡುವಾನೆ ।
ಮಲತವರೆದೆಮೇಲೆ ಸುಳಿದಾಡುವಾನೆ ॥ ೨ ॥

ನಳಿನಭವರಿಗೆ ತಾ ನಿಲುಕದ ಆನೆ ।
ಹಲವು ಕವಿಗಳಿಗೆ ಸಿಲುಕದ ಆನೆ ॥
ಒಲವಿಂದ ಭಕತರ ಸಲಹುವ ಆನೆ ।
ಬಲಪ್ರಸನ್ವೇಂಕಟನಿಲಯನೆಂಬಾನೆ ॥ ೩ ॥

# ಅಮ್ಮ ಬಾರೋ ರಂಗಮ್ಮಾ ಬಾರೊ

ರಾಗ–ದೇಸಾಕ್ಷಿ (ಮಾಂಡ್) ಆದಿತಾಳ (ಕಹರವಾ)

ಅಮ್ಮ ಬಾರೋ ರಂ- | ಗಮ್ಮಾ ಬಾರೊ ಪುಟ್ಟ
ತಮ್ಮ ಬಾರೊ ಮುದ್ದಿ- | ಸುಮ್ಮ ತಾರೋ || ಪ ||

ಅಯ್ಯಾ ಬಾರೋ ಅಜ- | ನಯ್ಯಾ ಬಾರೊ ಚಿನು-
ಮಯ್ಯಾ ಬಾರೊ ಬೆಣ್ಣೆ- | ಗಯ್ಯಾ ಬಾರೋ || ೧ ||

ಕಂದ ಬಾರೋ ಪೂರ್ಣ- | ನಂದ ಬಾರೋ ಸುರ-
ವಂದ್ಯಾ ಬಾರೊ ಬಾಲ್ಮು | ಕುಂದಾ ಬಾರೋ || ೨ ||

ಅಣ್ಣಾ ಬಾರೋ ತಾವರೆ- | ಗಣ್ಣಾ ಬಾರೋ ಎನ್ನ
ಚಿನ್ನಾ ಬಾರೋ ಶಿಶು | ರನ್ನ ಬಾರೋ || ೩ ||

ನಲಿದು ಬಾರೊ ಕರುಣಾ- | ಜಲಧಿ ಬಾರೋ ಆಡಿ
ಬಳಿದೆ ಬಾರೋ ಕರೆದ- | ರೊಲಿದು ಬಾರೋ || ೪ ||

ಶ್ರೀಶಾ ಬಾರೋ ಹಸು- | ಗೂಸೆ ಬಾರೋ ಪರಿ–
ತೋಷಾ ಬಾರೋ ಪ್ರಸನ್ವೆಂಕ- | ಟೇಶ ಬಾರೋ || ೫ ||

## ಸುಕಾಲಕೆ ಧರ್ಮವ ಮಾಡುವದೇ ಲೇಸು

ರಾಗ–ಯಮುನ  ತಾಳ–ಝಂಪೆ (ಝಪ್)

ಸುಕಾಲಕೆ ಧರ್ಮವ ಮಾಡುವದೇ ಲೇಸು ‖ ಪ ‖

ಯೌವನವೆಂಬ ಸುಕಾಲಕೆ ಸುರಮುನಿ |
ಸೇವ್ಯನ ಭಾಗವತರನ ಮೆಚ್ಚಿಪ ‖
ದಿವ್ಯಜ್ಞಾನ ವೈರಾಗ್ಯ ಭಕ್ತಿ ಇರಲಿಬೇಕು |
ಹವ್ಯಾಸನಡಿಯದು ಮುಪ್ಪುದುಷ್ಕಾಲಾ ‖ ೧ ‖

ಧನದಾಗಮದ ಸುಕಾಲಕೆ ಮಹಾಸತ್ಪಾತ್ರ- |
ರನು ಕರೆದು ಅರ್ಚಿಸಿ ಉಣಿಸಿ ಕೃಷ್ಣಾ- ‖
ರ್ಪಣ ಬುದ್ಧಿಯಿಂದ ಸರ್ವಸ್ವನೊಪ್ಪಿಸಬೇಕು |
ತನಗಿಲ್ಲದಾಗೆ ದಾರಿದ್ರ್ಯ ದುಷ್ಕಾಲಾ ‖ ೨ ‖

ವೃತ್ತಿ ಕ್ಷೇತ್ರಿದ್ದ ಸುಕಾಲಕೆ ಶ್ರೀಮಧ್ವ- |
ಶಾಸ್ತ್ರ ವ್ಯಾಖ್ಯಾತರಿಗಿತ್ತು ಧನ ‖
ಸಾರ್ಥಕಮಾಡಿ ಸಂತೋಷದಲ್ಲಿರಬೇಕು |
ತಾ ಸ್ಥಾನಭ್ರಷ್ಟನಾಗಿಹುದೆ ದುಷ್ಕಾಲಾ ‖ ೩ ‖

ಸಂಸಾರಾವಸ್ಥೆಯ ಸುಕಾಲಕೆ ಸಜ್ಜನಕೆ |
ಹಂಸವಾಹನ ಪಿತನ ಅಂಘ್ರಿಪದುಮ ‖
ಪಾಂಸುಲಭ್ಯವು ಕೇಚಿತ್ ಕಾಲಕೆ ಹರಿಯಲ್ಲಿ |
ಸಂಶಯ ಭಕ್ತಿಯವನಿಗೆ ದುಷ್ಕಾಲಾ ‖ ೪ ‖

ಮುಕ್ತ ಮಹಿಮಗೆ ಜ್ಞಾನವೇ ದ್ರವ್ಯ ವಿಷಯ ವಿ- |
ರಕ್ತಿಯೇ ಸೌಭಾಗ್ಯ ಸಕಲ ವಿಜಯ ||
ಭಕ್ತವತ್ಸಲ ಪ್ರಸನ್ವೆಂಕಟೇಶನ ಸೇವಾ- |
ಸಕ್ತಿ ಇಲ್ಲದಾಗುವ ಕಾಲ ದುಷ್ಕಾಲಾ || ೫ ||

## ಒಲಿಯಯ್ಯಾ ರಂಗ ಒಲಿಯಯ್ಯಾ

ರಾಗ- ತೆಲಗಕಾಂಬೋದಿ (ಕಾಫಿ) ತಾಳ-ಬಿಲಂದಿ (ತೀನ್ ತಾಲ)

ಒಲಿಯಯ್ಯಾ ರಂಗ | ಒಲಿಯಯ್ಯಾ ||
ನೆಲೆಗಾಣದ ಭವಜಲದೊಳು ಮುಳುಗುವೆ || ಪ ||

ಮಾಯದ ಕೈಯಲಿ ಮೇಲೆ ಮೇಲೆ ಸುತ್ತಿ |
ಆಯಾಸಬಡುತಿದೆ ಪ್ರಾಣದಾತಾ ||
ಬಾಯೆತ್ತಿ ಗೋವಿಂದ ಹರಿಯನ್ನಲೀಸದು |
ಕಾಯೊ ದಯಾಳು ಕರಿವರದ ಕೃಷ್ಣಾ || ೧ ||

ಮನ ನೀರಾನೆಯ ಕಟ್ಟನೊಳಗೆ ಸಿಕ್ಕಿ |
ಕ್ಷಣಕ್ಷಣ ದೈನ್ಯದಿ ಒರಲುತಿದೆ ||
ತನತನಗೆಳಿದು ದಣಿಸುವ ಇಂದ್ರಿಯ ಜಂತು |
ಮುನಿಸೇವ್ಯ ನಿನ್ನೊಳಿಗಕ್ಕೆ ದೂರಾದೆ ಕೃಷ್ಣಾ || ೨ ||

ಬುದ್ಧಿ ತಪ್ಪಿದವಗೆ ಅಪದ್ಧ ನಡೆವವಗೆ |
ಶುದ್ಧ ಕಾರಣ ದಿವ್ಯ ನಾಮವಲ್ಲವೆ ||
ಉದ್ಧರಿಸು ಬೇಗ ಪ್ರಸನ್ವೆಂಕಟ ಕೃಷ್ಣಾ |
ತಿದ್ದಿಟ್ಟುಕೊಳ್ಳೊ ನಿನ್ನವಗೆ ನಿರ್ಣಯ ನೀನೇ || ೩ ||

# ಸಂತಾರೇ ಭವದೂರರು

ರಾಗ-ಶಂಕರಾಭರಣ (ಸಾರಂಗ) ತಾಳ-ಅಟ (ದೀಪಚಂದಿ)

ಸಂತಾರೆ ಭವದೂರರು | ಹಿತಕಾಯರು ॥ ಪ ॥

ಸಂತರ ಸೇವೆ ಶ್ರೀಹರಿಸೇವೆ |
ಸಂತರ.ಮತವೆ ಹರಿಸಮ್ಮತವು ॥
ಸಂತರ ಮತಿಯೇ ಮುಕುತಿಯ್ಸ್ಗತಿಯು |
ಸಂತರ ಪಾದ ಚಿಂತನಿಗಾಹ್ಲಾದಾ ॥ ೧ ॥

ಸಂತರ ಗಾತ್ರ ಭುಹನ ಪವಿತ್ರ |
ಸಂತರ ನೋಟಾ ಪಾಪಗಳೋಟಾ ॥
ಸಂತರ ವಚನ ಧರ್ಮವಿರಚನ |
ಸಂತರ ಸಂಗ ತೋಷತರಂಗ ॥ ೨ ॥

ಸಂತರಿಂದಹಿಕಾಮುಷ್ಮಿಕ ಸೌಖ್ಯ |
ಸಂತರ ಅಭಯಾ ವಿರತಾವ ಭಯಾ ॥
ಸಂತರ ಕಂಡವ ಸುಖವನುಂಡವ |
ಸಂತವಿಯೋಗ ತಮಸಿನ ಭೋಗ ॥ ೩ ॥

ಸಂತರ ಭೇದ ವಂಶವಿಚ್ಛೇದಾ |
ಸಂತರ ಪ್ರೀತಿ ಶುಭಪ್ರದ ಪ್ರಾಪ್ತಿ ॥
ಸಂತರ ವಾರ್ತಾಽಖಿಳ ಪುರುಷಾರ್ಥಾ ॥ ೪ ॥

ಸಂತರ ಊರು ಎನ್ನ ತವರೂರು |
ಸಂತರ ಗತಿಗೋತ್ರರು ಎನಗಾಗಿ ॥
ಸಂತರ ಪದವನೊಪ್ಪಿದರೊಲಿವ |
ಸಂತರಿಗರಸಾ ಪ್ರಸನ್ವೆಂಕಟೇಶಾ ॥ ೫ ॥

## ಮನವೇ ಮಾಧವನ ಮರೆತುದರಿಂದೆ

ರಾಗ-ಭೈರವಿ (ಭೀಮಪಲಾಸ) ತಾಳ–ಏಕ (ತೀನ್ ತಾಲ)

ಮನವೇ ಮಾಧವನ ಮರೆತುದರಿಂದೆ ದಣುವಾಯಿತು ಹಿಂದೆ ||
ಕ್ಷಣವೊಂದು ಬಿಡದಿರು ಕೃಷ್ಣನ ಮುಂದೆ || ಪ ||

ಘನವಿಷಯಂಗಳ ನೆನವಿಲಿ ಪುನಃ ಪುನಃ |
ತನುವ ವಹಿಸಿ ಭವವನವನು ಚರಿಸಿದೆ || ಅ. ಪ. ||

ಹರಿವಾರ್ತೆಯ ಕೇಳು ಕೇಳಿದ್ದೆ ಕೇಳು ಅರಿ ಆರುವರನಾಳು |
ಅರಿವಿಂದ ಗರುವದ ಮೂಲವ ಕೀಳು ||
ಹೆರವರ ಹರಟೆಗೆ ಪರವಶನಾಗದೆ |
ಕರಿವರವರದನ ವರವನೆ ಬೇಡು || ೧ ||

ಹರಿಗುರುವಿಗೆ ಎರಗು ಅರಿತರಿತೆರಗು ತಪವೆರಡಲಿ ಸೊರಗು |
ಸೊರಗಿದ್ದವರನ್ನೇ ಕಂಡು ಕೊರಗು ||
ತಿರುಗ್ಯೊಡಲುರಿಗೆ ಮುಳ್ಳೊರಿಗೆ ಸ್ಮರಾಸ್ತ್ರಕೆ |
ಗುರಿಯಾಗದೆ ಹರಿಸೆರಗ ಬಿಡದಿರು || ೨ ||

ಹರಿವಿಗ್ರಹ ನೋಡು ನೋಡಿದ್ದೆ ನೋಡು ಮಮಕಾರವೀಡಾಡು |
ಸ್ಥಿರವಂದನೆ ಬೇಡಸ್ಥಿರವ ಬಿಸಾಡು ||
ಸಿರಿವಂತ ಸಿರಿ ಪರವಧುಗಳ ಸಿಂಗರ |
ವೆಣಿಸದೆ ಸಿರಿವರನನ್ನೇ ಬಯಸು || ೩ ||

ಹರಿಪ್ರಸಾದವನುಣ್ಣು ನೆನೆನೆನೆದುಣ್ಣು ಶ್ರೀಹರಿ ಪ್ರೀತ್ಯೆನ್ನು |
ಹರಿಪ್ರೇರಕ ನೇಮಕ ಸಾಕ್ಷಿಕನೆನ್ನು ||
ಹರಿಪ್ರಿಯವಲ್ಲದಪರುಪಿತ ಸಂಪರಿ |
ಚರರುಪಚರಿಸಿದೆ ಹರಿಯಾಚರಿಸು || ೪ ||

ಹರಿಯಂಘ್ರಿಪರಾಗವ ಗ್ರಹಿಸ್ಯಾಘ್ರಾಣಿಸು ಹರಿಯುವರಿಗೆ ಉಣಿಸು |
ಹರಿಭಕ್ತಿ ಜ್ಞಾನ ವೈರಾಗ್ಯವ ಗಳಿಸು ||
ಹರಿಪ್ರಿಯ ಪ್ರಭು ಮಧ್ವಾಚಾರ್ಯರ ಪ್ರಿಯ ಮೇಲ್- |
ಗಿರಿಪ್ರಸನ್ವೆಂಕಟಗಿರಿಯನೆ ನಂಬು ‖ ೫ ‖

## ಏನು ಗತಿಯೋ ರಂಗಾ

**ರಾಗ-ವರಾಳಿ (ಮಾಲಕಂಸ)** **ತಾಳ-ಝಂಪೆ (ಝಪ್)**

ಏನು ಗತಿಯೋ ರಂಗಾ ನಿನ್ನವ ನಾನಾಗಿ |
ಜ್ಞಾನದಂತಿರಲಿಲ್ಲವೋ ‖ ಪ ‖

ಉಂಡುಂಡು ತುಡುಗಕೋಣನ ಪರಿ ಸೊಕ್ಕಿದೆ |
ಕಂಡಲಿ ಕುಳಿತೆ ನೊಣನ ತೆರದಿ ||
ಭಂಡಭೂತದ ಮಾತನಾಡಿ ಭಂಡನಾದೆ |
ಪುಂಡರೀಕಾಕ್ಷ ನನ್ನಂಥಾ ಪಾತಕಿಗೆ ‖ ೧ ‖

ಬಲು ಶಾಸ್ತ್ರಶ್ರವಣೆಂಬುವ ಮಳೆಗರದೇನು |
ಕಲುಗುಂಡಿನಂತೆ ಕೆಟ್ಟಿದೆ ತೊಯ್ಯದು ||
ಹಲವು ಅಧ್ಯಾತ್ಮವನು ಉಸುರೇನು ಚಿತ್ತದ |
ಕಳವಳಿಕೆ ನಿಲಿಸಲಾರದ ಪಾಮರನಿಗೆ ‖ ೨ ‖

ಭವದುಃಖನುಂಬಾಗ ನೋವು ಬೇನೆನ ಹಾಗ |
ತವಕದಿ ನುಡಿವಾಗ ಕನಸಿನಾಗ ||
ಅವಿರಳಾ ಅಚ್ಯುತಾ ನಿನ್ನಂಘ್ರಿ ನೆನೆ ಈಶಾ |
ಅವಸರಕೊದಗೆಂದೆ ಪ್ರಸನ್ವೆಂಕಟೇಶಾ ‖ ೩ ‖

## ಸಂಗವಾಗಲಿ ಸಾಧು ಸಂಗವಾಗಲಿ

ರಾಗ-ಬಾಗೇಶ್ರೀ (ಭೈರವಿ) ತಾಳ ರೂಪಕ (ದಾದರಾ)

ಸಂಗವಾಗಲಿ ಸಾಧು | ಸಂಗವಾಗಲಿ ||
ಸಂಗದಿಂದ ಲಿಂಗದೇಹ ಭಂಗವಾಗಲಿ || ಪ ||

ಅಚ್ಯುತಾಂಘ್ರಿನಿಷ್ಠರಾದ ಯ- |
ದೃಚ್ಛಾಲಾಭ ತುಷ್ಟರಾದ ||
ನಿಚ್ಚ ಜ್ಞಾನವಂತರಾದ |
ಅಚ್ಚ ಭಾಗವತರ || ೧ ||

ತಂತ್ರಸಾರ ಅಷ್ಟಮಹಾ |
ಮಂತ್ರಪರಿಪೂರ್ಣ ಸ್ನೇಹ ||
ಯಂತ್ರದಿಂದ ಮೂಜಗತ್ ಸ್ವ- |
ತಂತ್ರನ ಗುರಿಮಾಡುವರ || ೨ ||

ಪಂಚಸಂಸ್ಕಾರ ಭೇದ |
ಪಂಚಯುಕ್ತರಾಗಿ ಪ್ರ- ||
ಪಂಚಸೂರಿ ಪ್ರಸನ್ವೆಂಕಟ |
ಪಂಚಬಾಣನಯ್ಯನವರ || ೩ ||

## ಯೋಗವೆಂದರೆ ದಾವುದು ಮಾನಿಸಾಗೆ

ರಾಗ-ನಾಮಕ್ರಿಯೆ (ಮಿಶ್ರಕಾಫಿ) ತಾಳ-ಅಟ (ದೀಪಚಂದಿ)

ಯೋಗವೆಂದರೆ ದಾವುದು ಮಾನಿಸಾಗೆ |
ಯೋಗವೆಂದರೆ ದಾವುದು ||
ನಾಗಶಯನನ ನಾಮವ ಕೂಗುವದೆ ಮಹಾಯೋಗ || ಪ ||

ಪೂಸರಳನ ಬಲಿಗೆ ಸಿಲುಕಿ ದೃಢ |
ಆಸನ ಬಲಿದು ಮಿಗೆ ||
ಹಾಸ್ಯವದನೆಂಬರ ಲೇಶ ಹಾರೈಸದೆ |
ದಾಸಾಗಿ ಹರಿಯ ಸದಾ ಧ್ಯಾನವೇ ಮಹಾಯೋಗ || ೧ ||

ವಾಗಾದಿಂದ್ರಿಯ ಕಟ್ಟಾದೆ ಕುಂಭಕವೆಂದು |
ಮೂಗಿನುಸಿರ ಕಟ್ಟಿದ ||
ಭೋಗಾ ಬಯಸದೆ ತಾನಾಗಿ ಬಂದದನುಂಡು |
ಲೋಗರ ಹಣ ಹೆಣ್ಣಿನ ತ್ಯಾಗವೇ ಮಹಾಯೋಗ || ೨ ||

ಭಾವಶುದ್ಧಿಯ ಮಾಡದೆ ಯೋಗ ಮಾರ್ಗದ |
ಠಾವಸಿದ್ಧಿಯ ಮಾಡಿದ ||
ದೇವ ಪ್ರಸನ್ವೆಂಕಟ ವರದನ ಸ- |
ದ್ಭಾವುಕರ ಪಾದಾಂಬುಜ ಸೇವೆಯೇ ಮಹಾಯೋಗ || ೩ ||

## ಆರೆನ್ನ ಉಳುಹುವರೈ ಎಲೊ ರಂಗಾ

ರಾಗ–ದೇಶಿ (ಪಟದೀಪ) ತಾಳ– ಆದಿ (ತೀನ್ ತಾಲ್)

ಆರೆನ್ನ ಉಳುಹುವರೈ ಎಲೊ ರಂಗಾ |
ಘೋರಾರಣ್ಯ ಭವದಿ ಸಿಕ್ಕಿದೆ ರಂಗಾ || ಪ ||

ಎಂಟು ಕಾಡಾನೆ ಎಂಟು ಕಡೆಯಲಿ ನಿಂತಿವೆ |
ಗಂಟನಿಕ್ಕಿವೆ ಮೂರು ದಳ್ಳುರಿಯ ||
ಸುಂಟರ ಗಾಳ್ಯಬ್ಬರಿಸಲು ಗಿಡ |
ಗಂಟು ಬಿದ್ದೆ ನೀನಲ್ಲದೆನ್ನಾ || ೧ ||

ಹುಲಿಯೊಂದು ಗುಡಿಗುಡಿಸುತಿದೆ ಭಯಂಕರ |
ತೋಳೆರಡು ಕೆಕ್ಕರಿಸುತಿವೆ ||
ಸಲುಗೆಯ ಕೋತಿ ಒಂದಣಕಾಡುತಲಿದೆ |
ಮೇಲೆ ಕರಡಿಯು ಹತ್ತಿಳವುತಿದೆ || ೨ ||

ಕಾಳುರಗನ ಕಟ್ಟು ಮೈತುಂಬ ನನ್ನ |
ನಾಲಿಗೇಳದು ನಿನ್ನ ಕರೆಯಲಿಕೆ ನಿ- ||
ನ್ನಾಳನು ಕರೆಸಿಕೊಳ್ಳೋ ತಂದೆ ನಾ |
ಗೋಳಿಟ್ಟೆ ಪ್ರಸನ್ನವೆಂಕಟ ಬಂಧು || ೩ ||

## ಚಂಚಲಿಸದೆ ನೀನು ಚತುರನಾಗು

ರಾಗ-ತೆಲಂಗ (ಶಂಕರಾ) ತಾಳ-ಅಟ (ಝಂಪ್)

ಚಂಚಲಿಸದೆ ನೀನು ಚತುರನಾಗು |
ವಂಚಿಸದೆ ಸಕಲನೊಪ್ಪಿಸು ಹರಿಗೆ ಮನವೆ || ಪ ||

ಆರು ನಿನ್ನವರೆಂಬಿ ಅವರಗಲಿದರು ಕಡೆಗೆ |
ಭೂರಿ ಸಂಚಿತ ಸಂಪದೆರವಾಯಿತೊ ||
ಜಾರುತಿವೆ ಕ್ಷಣಲವಗಳೀಗಾಗ ತಿಳಿಯದು |
ನಾರಸಿಂಹನ ನಂಬೊ ನಿಷ್ಠೆಯಲಿ ಮನವೆ || ೧ ||

ಅಲ್ಪ ಸುಖಕಾಗಿ ನೀ ಅನೇಕ ಸುಖ ಮರೆವರೇ |
ಕಲ್ಪಕಲ್ಪಕೆ ನಿರಯನುಣಲಿಬಹುದೇ ||
ಅಲ್ಪರುಪದೇಶದಲಿ ಭ್ರಾಂತನಾಗದೆ ಶೇಷ- |
ತಲ್ಪನ್ನ ಮೊರೆಹೋಗು ತಡೆಯದಲೆ ಮನವೆ || ೨ ||

ನಿನ್ನಿಂದ ಭವಬಂಧನವು ಮೋಚನವು ನೋಡೋ |
ನಿನ್ನಿಂದ ಪ್ರಸನ್ವೆಂಕಟೇಶನೊಲಿಮೆ ||
ಇನ್ನೆನ್ನ ದಣಿಸದಿರು ಇದರಿಂದೆ ಮೀರಿದರೆ |
ಘನ್ನಗುರುಮಧ್ವೇಶನಾಣೆ ನಿನಗೆ || ೩ ||

## ಹುಡಿಯಾ ಹೊರಳೀಸು ಬಡಕೊಂಡರೇನು?

ರಾಗ–ಆನಂದಭೈರವಿ (ಬಾಗೇಶ್ರೀ) ತಾಳ–ಝಂಪೆ (ಝಂಪ್)

ಹುಡಿಯಾ ಹೊರಳೀಸು ಬಡಕೊಂಡರೇನು |
ಕಡಲಶಯನನೊಳು ದೃಢಭಕ್ತಿ ಇರದೆ || ಪ ||

ಐದು ಪಾವಕನೊಳು ಮೈದಡಹಿದರೇನು |
ವೈದು ಶ್ವಾಸ ನೆತ್ತಿಲಿಟ್ಟರೇನು ||
ಬೈದು ಅಡವಿಲಿ ತುದಿಕಾಲ್ಮೇಲೆ ನಿಂತರೇನು |
ಮೈದುನರ್ಜುನಸಖನಪಾದ ಪೂಜಿಸದನಕಾ || ೧ ||

ತೊಪ್ಪಲಮೆದ್ದಘ ತಪ್ಪಲಾಗಿಸಲೇನು |
ಉಪವಾಸದಿ ಅನಿಲ ನುಂಗಲೇನು ||
ತಪ್ಪದೆ ಇಳೆಯ ಸುತ್ತಾಡಿ ದಣಿದರೇನು ಕಂ– |
ದರ್ಪನಯ್ಯನ ಒಲವಿಲ್ಲದನಕಾ || ೨ ||

ಮಧ್ವಸರೋವರದಿ ಮೀಯದ ಜನುಮೇನು |
ಮುದ್ದು ಕೃಷ್ಣನ್ನ ನೋಡದ ಅಕ್ಷಿಯೇನು ||
ಮಧ್ವೇಶ ಪ್ರಸನ್ವೆಂಕಟೇಶನೊಪ್ಪಿರದವನು |
ಇದ್ದೇನು ಇಲ್ಲದೇನೀಧರೆಗೆ || ೩ ||

## ನಗಲಿಬಹುದು ನಗು ನಗು ರಂಗಯ್ಯಾ

ರಾಗ–ರೇಗುಪ್ತಿ (ಸೋಹನಿ) ತಾಳ–ರೂಪಕ (ದಾದರಾ)

ನಗಲಿಬಹುದು ನಗಲಿಬಹುದು ನಗು ನಗು ರಂಗಯ್ಯಾ ।
ಜಗದ ಮಾತ್ಸರ್ಯಅಘುದಧಾತು
ಬಗೆಯನರಿತು ಮುಗುಳು ನಗೆಯ ॥ ಪ ॥

ಒರೆದು ಒರೆದು ಭಾರತದರ್ಥವ ಅರಿದು ।
ಅರಿದು ವರ ಭಾಗವತ ॥
ಪರಿಯ ಪರಿಯ ಪುರಾಣಶ್ರುತಿಯ ।
ಪಾರಾಯಣ ಮಾಡಿ ಕುರುಡ ಬಧಿರ ॥
ನರರ ತೆರದಿ ಅರಹು ಮರಹು ।
ಬೆರತು ಬೆರತು ತರತಮಿಲ್ಲದೆ ॥
ಹರಿ–ಹರ–ಅಜರು ಬ್ಯಾರೆ ಬ್ಯಾರಿಲ್ಲೆಂಬ ।
ಪರಮ ಪಾತಕರಿರವ ನೋಡಿ ॥ ೧ ॥

ಮಕ್ಕಳ ಮಡದಿ ಅಕ್ಕರಬಡಿಸಿ ।
ರೊಕ್ಕದ ಮದದಿ ಸೊಕ್ಕಿ ಸಜ್ಜನರ ॥
ಲೆಕ್ಕಿಸದವಗೆ ರಕ್ಕಸರಂತೆ ।
ನಿಕ್ಕರ ನುಡಿದು ಕಕ್ಕಸದಿಂದ ॥
ಪುಕ್ಕಟೆ ಪುಣ್ಯದ ಲೆಖ್ಖವ ಕಳೆದು ।
ಫಕ್ಕನೆ ಜವನೊರಿಕ್ಕಿದ ಬಲಿಗೆ ॥
ಸಿಕ್ಕಿ ಬಳಲುತ ನಕ್ಕವನುಂಬಂಥ ।
ಮೂರ್ಖರ ತಾಮಸಮುಖ್ಯರ ನೋಡೀಗ ॥ ೨ ॥

ಸುಂದೋಪಸುಂಡ ಜಲಂಧರ ಕೀಚಕ ।
ಕಂಥರದಶಕ ಸೈಂಧವ ಜಟಾದ್ಯ– ॥

ರಂದು ಪರಸ್ತ್ರೀಯ ಸೌಂದರ್ಯಕೆ ಮತಿ- |
ಗುಂದಿ ಲಯವಾದರೆಂದು ಕೇಳಿ ||
ಇಂದುಮುಖಿಯರ ಛಂದಕ್ಕೆ ಹುಚ್ಚಿಟ್ಟು |
ಕಂದರ್ಪ ವಿಶಿಖವೃಂದವಶಾಗಿ ನೂ- ||
ರೊಂದು ಕುಲ ಯಮಮಂದಿರ ಹೊಂದಿಪ |
ಮಂದ ಮಹಾಮದೋನ್ಮತ್ತರ ನೋಡೀಗ || ೩

ಸುರರ ಸಂಪದ ಪರಮ ಪದಕೆ |
ಕಾರಣವಾಗಿರೆ ಸುರೇತರರೆಲ್ಲರೂ ||
ಇರುಳೆ ಹಗಲೆ ಸೈರಿಸಲಾರದೆ |
ಸೊರಗಿಹೋದ ವಿವರ ಕೇಳಿ ||
ದುರುಳ ಕೌರವ ಮಹಾಪಾಂಡವರ |
ಸಿರಿಯು ತಮ್ಮದೆಂದ್ದರಿದು ಹೋಗಿರೆ ||
ಪರರ ದ್ರವ್ಯಕೆ ಮರುಗಿ ಬಯಸಿ |
ನರರು ಕೆಡುವ:ಪರಿಯ ನೋಡೀಗ || ೪

ಪ್ರತಿದಿನ ನಿನ್ನ ಪ್ರತಿಮೆ ಪೂಜೆ ಸದ್ |
ವ್ರತವಮಾಡಿ ಸತ್ಕಥೆಯಾ ಶ್ರೀಮಧ್ವ- ||
ಮತಮಹಿಮೆಯನತಿಕ್ರಮಿಸಿ ಕು- |
ಚ್ಛಿತವೆನಿಸುವ ಪಥದಲಿ ||
ಪತಿತರಾಗಿ ಸದ್ಗತಿಯ ಕಾಣದಾ |
ಚತುರ ಬರಿಯ ಮಿತಭಾಷಕರ ||
ಸ್ಥಿತಿಯರಿತು ನಾಥ ಪ್ರಸನ್ವೆಂಕಟ- |
ಪತಿಯೇ ನೀ ಮಂದಸ್ಮಿತದಲೀಗ || ೫

## ಬಿಡು ನಾಚಿಕೆಯನುಘ್ಘಡಿಸು ಚಕ್ರಿಯನು

ರಾಗ-ಕೇದಾರಗೌಳ (ದೇಸ್) ತಾಳ-ಆಟ (ದೀಪಚಂದಿ)

ಬಿಡು ನಾಚಿಕೆಯನು- | ಘ್ಘಡಿಸು ಚಕ್ರಿಯನು ||
ಹಿಡಿಯೈ ವೈಕುಂಠಾ ಚಾ- | ವಡಿಯುವನಡಿಯಾ || ಪ ||

ಎಳೆತನ ಯೌವನ ಮುಪ್ಪೆಂದು ಜಪಿಸಿ |
ಹೆಬ್ಬುಲಿಯಂಥಾ ಮೃತ್ಯು ಗಂಟಲ ಬಲಿಗೆ ||
ತಿಳಿದೂ ತಿಳಿದೂ ಸಂದುಗಡಿಯದ ಲೇಖವ- |
ನಳಿಯೆ ರಾಮನನು | ಹೊಗಳೋ ಜೀವನವೇ || ೧ ||

ಅಹಂಕಾರ ವಾರಿಧಿಯಲ್ಲೀಶ್ಯಾಡಿ ಬರೆ |
ಬಹಿರ ಸದ್ಗುಣದಿ ನಿರಯಕೆ ಪೋಗದೆ ||
ಅಹರ್ನಿಶಿ ಶ್ರೀನಾಥನೊಲಿವಂತೆ ಭಕುತಿಯ |
ಸಹಸ ಸಾಧಿಸು ಡಂಭವ್ಯಾಕಿನ್ನು ಮನವೇ || ೨ ||

ಯೋಚನೆಗೊದಗದಾನಂತಾ ಮಹಿಮನಿರೆ |
ವಾಚಿಸವನ ಗುಣ ಕರ್ಮಗಳ ||
ನಾಚದೆ ಪ್ರಸನ್ವೆಂಕಟನ |
ಮುಂದೆ ಕುಣಿದಾಡೊ || ೩ ||

## ಹರಿಕಥಾಶ್ರವಣ ಸಾಧನವೆ ಮುಕುತಿ ಇದಕೆ

ರಾಗ-ಬಿಲಹರಿ (ಬಾಗೇಶ್ರೀ) ತಾಳ-ಝುಂಪೆ (ಝುಪ್)

ಹರಿಕಥಾಶ್ರವಣ ಸಾಧನವೆ ಮುಕುತಿ ಇದಕೆ
ಸರಿಧರ್ಮವಿಲ್ಲೆಂದು ಪೇಳ್ವವು ಶ್ರುತಿತತಿ || ಪ ||

ಶ್ರವಣದಿಂದಲಿ ಸಕಲ ಸದ್ಧರ್ಮಸಾಧನವು
ಭುವಿಯಲ್ಲಿ ಪೂಜ್ಯರಾಹೋರು ಸುಜನರು
ಸವೆಯದಾನಂದಮಯ ಭಕುತಿಸಿರಿ ದೊರಕುವದು
ಅವರೇವೆ ಸೂಜ್ಞರಾಗ್ವರು ಹರಿಯ ದಯದಿ ॥ ೧ ॥

ಅನವರತ ಶ್ರವಣವೆ ಮನನಮೂಲವು ಗಡ
ಮನದಲಿ ಹರಿಧ್ಯಾನ ಖಚಿತಾಹುದು
ಘನಪರಾತ್ಪರತತ್ವ ತಿಳುಹಿ ವಿರಕುತಿ ಭಾಗ್ಯ-
ವನು ಕೊಟ್ಟು ಶ್ರೀವಿಷ್ಣು ತೋರ್ವ ಗತಿ ಈವ ॥ ೨ ॥

ಶ್ರವಣದಲಿ ನಾರದಗೆ ಗತಕಲ್ಪದ್ಯಪರೋಕ್ಷ
ಸವಿಯದೆ ಸಾಮ್ರಾಜ್ಯ ಲೆಕ್ಕಿಸದ ಪ್ರಿಯವ್ರತ
ಅವನಿಪರು ವನಪೊಕ್ಕು ಹರಿಯನಾಶ್ರಯಿಸಿದರು
ದಿವಸೇಳರಲಿ ವಿಷ್ಣುರತನಿಗೆ ಮೋಕ್ಷಾ ॥ ೩ ॥

ದಿವಿಜ ಋಷಿ ಗಂಧರ್ವ ನೃಪರು ಮನುಜೋತ್ತಮರು
ವಿವಿಧ ತಿರ್ಯಗ್ಜಾತಿ ಸಜ್ಜೀವರು
ಶ್ರವಣಮಾತ್ರದಲಿ ಕಂಡರು ಸದ್ಗತಿಯನವರು
ದಿವಸಗಳೆಯದಲೆ ಆದರದಿಂದ ಬುಧರು ॥ ೪ ॥

ಹರಿಕಥಾಶ್ರೋತರಿಗೆ ಕರತಲವು ಮೋಕ್ಷ ಗಡ
ಗುರುದ್ವಾರದಲಿ ಹರಿ ದೊರಕುವನು ಸತ್ಯ
ಗುರುಮಧ್ವವರದ ಶ್ರೀಪ್ರಸನ್ವೆಂಕಟ ಕೃಷ್ಣ
ಕರವಿಡಿದು ಪೊರೆವ ಸದ್ಗುರು ಪ್ರಿಯಜನಕೆ ॥ ೫ ॥

## ನನಗೆ ಮನಕೆ ಬಡಿದಾಟಿಳಿದಾಟಾ

ರಾಗ-ಕೇದಾರ (ಧನಾಶ್ರೀ) ತಾಳ-ಆದಿ

ನನಗೆ ಮನಕೆ ಬಡಿದಾಟಿಳಿದಾಟಾ ! ಶ್ರೀ- |
ಸನಕಾದಿ ವಂದ್ಯ ಬಿಡಿಸಿ ಕಾಯೋ ದಿಟ || ಪ ||

ಸಲಿಲ ಸ್ನಾನವಮಾಡಿ ಊರ್ಧ್ವತಿಲಕವನಿಟ್ಟು |
ನಳಿನಾಕ್ಷ ನಿನ್ನಂಘ್ರಿ ಜಪಿಸೆಂದರೆ ||
ಛಲದಿಂದೆ ವಿಹಿತವಲ್ಲದ ದಾರಿಗೊಯ್ದೆನ್ನ |
ತೊಳಲಿಸಿ ನೆಲೆಗಾಣಿಸದ ಛಲಾವಿಡಿದೀದೆ || ೧ ||

ಬೇಡಿಕೊಂಡರೆ ಕೇಳದಾಡಿಕೊಂಡರೂ ಕೇಳ- |
ದೀಡ್ಯಾಡಿ ಬಿಸುಟೆನ್ನ ದಣಿಸುತಿದೆ ||
ಕಾಡಿ ನಾನಾ ಕ್ಲೇಶ ಮಾಡಿತೆಂಬುದಕೆ |
ಬಾಡಿ ಬಳಲಿದೆ ನಿನ್ನ ಕರುಣೆಲ್ಲವಿದಕೆ || ೨ ||

ಮನಪಶು ಕಟ್ಟಲು ಜ್ಞಾನದ ದೃಢವಿಲ್ಲ |
ಘನವೈರಾಗ್ಯ ಕಟ್ಟು ದೃಢವಿಲ್ಲ ||
ಮಿನುಗುವ ಭಕುತೆಂಬ ಎಳೆಹುಲ್ಲಿನಾಶಿಲ್ಲ |
ನಿನ್ನವಶಮಾಡಿಕೊಳೋ ಪ್ರಸನ್ವೆಂಕಟೇಶಾ || ೩ ||

## ಸ್ಥಿರವಲ್ಲೀ ಕಾಯಾ ಸ್ಥಿರವಲ್ಲಾ

ರಾಗ-ಶ್ರೀ (ಭೈರವಿ) ತಾಳ-ಆದಿ (ತೀನ್ ತಾಲ)

ಸ್ಥಿರವಲ್ಲೀ ಕಾಯಾ ಸ್ಥಿರವಲ್ಲಾ | ಹೀ- |
ಗರುಹಿದ್ದೂ ಹರಿಪಾದ ಮರೆವರೇ ಪ್ರಾಣಿ || ಪ ||

ಆಟ್ಟಡಿಗೆ ಎರವು ಉಟ್ಟುಡಿಗೆ ಎರವು ।
ಇಟ್ಟರೆ ಸಂತತಿ ಸಿರಿಯುರವು ॥
ಕಟ್ಟೊಡೆದು ಬೆಮರಿಡಿಸಿ ಜವನವರೊಯ್ಯೆ ।
ಇಟ್ಟಿರುವ ಧಾನ್ಯ ಧನವೆಲ್ಲೋ ಪ್ರಾಣಿ ॥ ೧ ॥

ಕೃಪಣತೆಯೊಳಗಿನ ನಿಪುಣತೆ ಬಾರದು ।
ಸ್ವಪನ ಸುಖಭೋಗಕೆ ಬಾರದು ॥
ವಿಪಿನದಹನ ಮೃಗದಂತಾಪ್ತರು ಬರರು ।
ನೃಪನಾರಾಧನೆ ಫಲವು ಸ್ಥಿರವೆಲೊ ಪ್ರಾಣಿ ॥ ೨ ॥

ಹರಿ ಕೊಟ್ಟಾಗಲೇ ಧರ್ಮ ದೊರಕಿಸಬೇಕು ।
ಸರಕಿದ್ದು ತಿರುಕಬುದ್ಧಿಯನು ಬಿಡು ॥
ಅರಿವುಳ್ಳವರ ಕೂಡಿ ಕೋಟಿ ಜತನಮಾಡು ।
ಮರುಗಲಿಬೇಡ ಮುತ್ತಿಗೆ ಬಂತು ಪ್ರಾಣಿ ॥ ೩ ॥

ಹವಳ ಮುತ್ತಿನಂಥ ಅವಳಿಮಕ್ಕಳ ನಂಬಿ ।
ಕುವಲೇಶನ ಪ್ರಿಯ ಕುಲೇಶನ ಪುರದೆ ॥
ಲವಲವಿಕೆಯ ನಿರಯವಾರ್ತೆ ಜರಿವಾಗ ತ- ।
ನ್ನವಳೆ ತನಗೆ ಓಕರಿಸುವಳೋ ಪ್ರಾಣಿ ॥ ೪ ॥

ಫಣಿತಲ್ಪಗೊಪ್ಪಿಸಿ ಹಣತೃಣ ಮಾಡದ ।
ಹೆಣ ತನ್ನ ತಾನೆ ಹೊಗಳಿಕೊಂಡರೆ ॥
ಎನಿತು ಕಾಲಕೆ ಮೆಚ್ಚ ಪ್ರಸನ್ವೆಂಕಟಪತಿ
ಘನತಪ್ಪಕಾಯ ತನ್ನವರನು ಪ್ರಾಣಿ ॥ ೫ ॥

## ಶ್ರೀವಿಷ್ಣು ಸ್ಮರಣೆಯಿಂ ಸಾಧುಸಂಸರ್ಗ

ರಾಗ–ಭೈರವಿ (ಭೂಪ) ತಾಳ–ಅಟ (ದೀಪಚಂದಿ)

ಶ್ರೀವಿಷ್ಣು ಸ್ಮರಣೆಯಿಂ ಸಾಧುಸಂಸರ್ಗ
ಶ್ರೀವಿಷ್ಣು ಸ್ಮರಣೆಯೆಂಬುದೆ ಅಪವರ್ಗ
ಶ್ರೀವಿಷ್ಣು ಸ್ಮರಣೇಲಿ ಸದ್ಬುದ್ಧಿ ದೀರ್ಘ
ಶ್ರೀವಿಷ್ಣು ಸ್ಮರಣೆಗೆಚ್ಚರ ಬುಧವರ್ಗ ॥ ಪ ॥

ಶೀತಲವಾಯ್ತು ಹಲಾಹಲ ಹರಗೆ
ಮಾತೆ ದ್ರೌಪದಿಲಜ್ಜೆ ಕಾಯಿತು ಮರುಗೆ
ಪಾತಕಿಯಜಮಿಳನ ಪಾಪವು ಕರಗೆ
ಪೂತರಾಗ್ವರು ಸುಜನರು ಒಳಹೊರಗೆ ॥ ೧ ॥

ಸಿರಿಯರ್ಥ ಮಾಡಲಚ್ಚರವಾದ ಸ್ಮರಣೆ
ಪರಸೋದ್ವಾಪರಿಯೆಂಬುವಾ ಗುಹ್ಯ ಸ್ಮರಣೆ
ವಿರಿಂಚಿಗೆ ತೃಪ್ತಿಯಾಗದ ನಾಮಸ್ಮರಣೆ
ಉರಗೇಶನ ಜಿಹ್ವೆಗೆ ನಿಲುಕದ ಸ್ಮರಣೆ ॥ ೨ ॥

ತ್ಯಾಗಭೋಗಯೋಗ ಛಿದ್ರ ಮುಚ್ಚುವದು
ಭೂ-ಗಗನಸ್ಥರ ಪುಣ್ಯ ಹೆಚ್ಚುವದು
ಕೂಗ್ಯಾಡಿ ಕುಣಿವರಾನಂದ ಫಲವಿದು
ಶ್ರೀಗಂಗಾಜನಕನ ತಂದು ತೋರುವದು ॥ ೩ ॥

ಭೂಪ್ರದಕ್ಷಿಣೆ ತೀರ್ಥಯಾತ್ರೆಗೆ ಮಿಗಿಲು ಅ–
ಸಂಪ್ರಜ್ಞಾತಸ್ಥರಿಗೆ ಹರಿಗೋಲು
ಸುಪ್ರಾಪ್ತ ಮುಕ್ತರುಂಬಮೃತಕಣಗಳು
ಶ್ರೀಪ್ರಾಣನಾಥನ ನಾಮಾವಳಿಗಳು ॥ ೪ ॥

ಸ್ವಾದ್ವನ್ನದೊಟ್ಟಲು ಹರಿನಾಮ ಸ್ಮರಣೆ
ಮಧ್ವಶಾಸ್ತ್ರಜ್ಞರ ವಚನಾಗ್ನಿಗೆ ಅರಣಿ
ಅದ್ವೈತಮತಧ್ವಾಂತಕ್ಕುದಿತ ಸತ್ತರಣಿ ಶ್ರೀ-
ಮದ್ವಿಷ್ಣು ಪ್ರಸನ್ವೆಂಕಟನ ಸ್ಮರಣೆ || ೫

## ಹೇಳಿದ ಯಮಧರ್ಮ ತನ್ನಾಳಿಗೆ

ರಾಗ–ಸಾರಂಗ (ಹಮೀರ) ತಾಳ–ಆದಿ (ತೀನ್‌ತಾಲ್)

ಹೇಳಿದ ಯಮಧರ್ಮ ತನ್ನಾಳಿಗೆ || ಪ ||

ಹೇಳಿದ ಯಮ ತನ್ನೂಳಿಗದವರಿಗೆ |
ಖೂಳ ದುರಾತ್ಮರಾಗಿ | ಬಾಳುವರನು ತರ.... || ೧ ||

ಹರಿ ಸಂಕೀರ್ತನೆಯ | ನರನಾರಿಯರು ಆ- ||
ದರದಲಿ ಮಾಡಿದ- | ವರ‍್ನಿಂದಿಪರ ತರ.... || ೨ ||

ಹರಿದಾಸರಿಗುಣ | ಕರಿಯದೆ ಜನ್ಮಾಂತ ||
ಒರಟು ಮಾತಿನ ಲುಬ್ಧ | ನರನಲ್ಲದೇ ತರ.... || ೩ ||

ಹರಿಕಥಾಮೃತ ಉಪ- | ಚರಕಾಗಿ ಕೇಳುವಾ ||
ಪರನಾರೇರಾಳುವ | ದುರುಳನ ಕಟ್ಟಿ ತರ.... || ೪ ||

ಗುರುಹಿರಿಯರೊಳು ಪ್ರತ್ಯು- | ತ್ತರ ಕೊಡುವರ ||
ಮರುಳಾಗಿ ಮಮತೆಯಾ | ಸತಿವಶದನ ತರ.... || ೫ ||

ಅಂಬುಜಾಕ್ಷನ ಪೂಜೆ | ಜಂಭದಿ ಮಾಡುವ ||
ರಂಭೆರೊಡನಾಟದ | ಡಂಭನ ಹಿಡಿತರ.... || ೬ ||

ಒಳ್ಳೇದು ಹಳಿದು ತಾ | ಬಲ್ಲವನೆನುವನ ||
ಜಲ್ಪಪ್ರಸನ್ವೆಂಕಟ | ವಲ್ಲಭಗರಿ ತರ.... || ೭ ||

## ವೃಥಾ ಭವದಿ ಮೆರೆದೆ ಮನುಜಾ

ರಾಗ-ಶಂಕರಾಭರಣ (ತೆಲಂಗ) ತಾಳ-ಆದಿ (ತೀನ್ ತಾಲ)

ವೃಥಾ ಭವದಿ ಮೆರೆದೆ ಮನುಜಾ | ವೃಥಾ ಭವದಿ ಮೆರೆದೆ
ರಥಾಚರಣಧರನ ಸ್ಮೃತಿಯ ಜರಿದು ನೀ || ಪ ||

ಸತಿಸುತರೆಂಬುವರತಿಶಯ ಗೃಹಧನ-
ಪತಿ ನಾನೆಂಬೊ ಮಮತೆ ಹಿಡಿದು
ಚತುರ್ಮುಖನಯ್ಯನ ವ್ರತವ ತ್ಯಜಿಸಿ ಅನ್ಯ
ಪತಿತ ಮಾರ್ಗವ ಹೊಂದಿ ಹತಭಾಗ್ಯನಾಗಿ || ೧ ||

ಅತಿಥಿಗಳಿಲ್ಲದೆ ಯತಿಪೂಜೆ ಗಯ್ಯದೆ
ಪುತಮಲ ಭಾಂಡಭರಿತನಾಗಿ
ರತಿಪತಿಪಿತನಂಘ್ರಿರತಿ ಲೇಶವಿಲ್ಲದೆ
ಸತತ ಯಮಪುರದ ಪಥವನು ಪಿಡಿದು || ೨ ||

ಮಿತಮನರಹಿತ ದುರ್ಮತಪಂಡಿತನಾಗಿ
ಪ್ರತಿಬೊಮ್ಮರಕ್ಕಸೋನ್ನತನೆನಿಸಿ
ಅತಿಪ್ರಾಜ್ಞ ಶಾಸ್ತ್ರದೇವತ ಪ್ರಸನ್ವೆಂಕಟ-
ಪತಿಯನ್ನೆ ಬಿಟ್ಟನ್ನಿತರ ದೈವ ನೆನೆದು || ೩ ||

## ಯಾತಕೆಲೆ ಮನವೆ ನೀ ಭೀತಿಗೊಳುವೆ

ರಾಗ-ದೇವಗಾಂಧಾರಿ (ಬಾಗೇಶ್ರೀ) ತಾಳ-ಝಂಪೆ (ಝಪ್)

ಯಾತಕೆಲೆ ಮನವೆ ನೀ ಭೀತಿಗೊಳುವೆ ಶ್ರೀ-
ನಾಥ ಜಗತಾತ ಹೆತ್ತಾತನಿರೆ ಅನವರತ || ಪ ||

ಒಡಲೊಳಿರೆ ನವಮಾಸ ಪಡಿಯನಡಿಸಿದರಾರು
ದೃಢಕುಚದಿ ಪಾಲ್ದುಂಬಿಕೊಡುವರಾರು
ನಡೆನುಡಿಗಲಿಸಿ ನಿದ್ರೆವಿಡಿಸಿ ಎಚ್ಚರಿಪರಾರು
ಕಡೆವೊದಲಿನೊಡೆಯನಿರಲಡಿಗಡಿಗೆ ಬರಿದೆ.... ॥ ೧ ॥

ಅಪ್ರಸಿದ್ಧಾತ್ಮನಿಗೆ ವಿಪ್ರಕುಲವಿತ್ತರಾರ್
ಶ್ರೀಪ್ರಜ್ಞಮತದಿ ನೆಲೆಸಿಪ್ಪರಾರು
ಅಪ್ರಬುದ್ಧರಿಗೆ ಮತಿಕ್ಷಿಪ್ರ ಬೋಧಿಪನು ಮು-
ಖ್ಯಪ್ರಾಣವರದ ಸಪ್ರಧಾನನಿರೆ ನಿರುತ.... ॥ ೨ ॥

ಧರೆಗೆ ಮಳೆಗರೆದು ಸಸಿಗಳನು ಬೆಳಸಿದರಾರು
ಗಿರಿವಿಪಿನ ಖಗಮೃಗವ ಹೊರುವರಾರು
ಪರಮ ಕಾರುಣಿಕ ನಮ್ಮ ಪ್ರಸನ್ವೆಂಕಟನೆ ಜಗ-
ದರಸೆಂದು ಶ್ರುತಿಸ್ಮೃತಿಯೊಳಿಹುದರಿದು ಮರೆದು....॥ ೩ ॥

## ಈ ದೇಹ ಮನನೆ ಘಾಳಿದೀಪಾ

ರಾಗ–ಕಲ್ಯಾಣಿ (ಭೀಮಪಲಾಸ) ತಾಳ–ತ್ರಿವಿಡಿ (ತೀನ್ ತಾಲ)

ಈ ದೇಪ ಮನವೆ ಘಾಳಿದೀಪಾ ॥ ಪ ॥

ನಳ ಪುರೂರವ ಹರಿಶ್ಚಂದ್ರ ಪುಣ್ಯಶ್ಲೋಕರು ।
ಇಳೆಯೊಳಿಲ್ಲಾದರಯ್ಯಾ ॥ ೧ ॥

ಹಂಬಲಾಗಡಲೊಳು ಮುಳುಗಲಿನ್ನಾವ ಸುಖಾ ।
ಅಂಬುಜಾಕ್ಷಗೆ ಸಲ್ಲಲೀ ಲೆಖ್ಖಾ ॥ ೨ ॥

ಧರ್ಮವ ಹಳಿದು ಸತ್ಕರ್ಮವ ಜರಿದರೆ ।
ನಮ್ಮ ಪ್ರಸನ್ವೆಂಕಟ ದೂರಾ ॥ ೩ ॥

# ಹೀಗಿದ್ದರೆ ಲೇಸು ಜ್ಞಾನಿಗೆ

ರಾಗ–ಸುರಟ (ಕಾಫಿ) ತಾಳ–ಏಕ (ಧುಮಾಳಿ)

ಹೀಗಿದ್ದರೆ ಲೇಸು । ಜ್ಞಾನಿಗೆ ।
ಹೀಗಿದ್ದರೆ ಲೇಸು ॥ ಪ ॥

ಸತಿ ಇದ್ದರೆ ಸಮಹಿತದವಳಾಗಿ ।
ಸುತನಿದ್ದರೆ ನಿಜಮತದವನಾಗಿ ॥ ೧ ॥

ಧನವಿದ್ದರೆ ಸಜ್ಜನಕೆ ವಿಭಾಗ ।
ಮನೆ ಇದ್ದರೆ ಮಧ್ಯಾಹ್ನಕನ್ನತ್ಯಾಗ ॥ ೨ ॥

ಭಕುತಿ ಇದ್ದರೆ ಡಂಭಕವನಳಿದು ವಿ– ।
ರಕುತಿ ಇದ್ದರೆ ಭವದಾಶೆಯು ಕಳೆದು ॥ ೩ ॥

ಮತಿ ಇದ್ದರೆ ಶುಭಮತಿಯವನಾಗಿ ।
ಧೃತಿ ಇದ್ದರೆ ದುಷ್ಕೃತಿಗಳ ನೀಗಿ ॥ ೪ ॥

ಪ್ರಸನ್ವೆಂಕಟೇಶನ ಪ್ರಸಾದವನುಣುತ ।
ವಿಷಮ ಜನನ ಮೃತಿ ಘಸಣೆ ತಪ್ಪಿಸುತ ॥ ೫ ॥

# ಸುಳಾದಿ

## ಉಪದೇಶ ಸುಳಾದಿ

### ಮಟ್ಟತಾಳ

ಮರೆಯೆ ಹರಿಗೆ ಅಭಿಮುಖರ ಭಾಗ್ಯವೇ ಭಾಗ್ಯ |
ಹರಿಗೆ ವಿಮುಖರ ಭಾಗ್ಯ ದುರ್ಭಾಗ್ಯ ||
ಹರಿಪ್ರಿಯ ಜನರ ವೃತ್ತಿ ನಿವೃತ್ತಿ |
ಹರಿಪರವಲ್ಲದ ಯಜ್ಞ ಅವಜ್ಞಾ ||
ಹರಿಮುಖ್ಯನೆಂಬೊ ನಿಗಮಾ ಸುಗಮಾ |
ಹರಿಯಾದರಿಸದ ಆಗಮಾ ದುರಾಗಮಾ ||
ಸಿರಿ ಪ್ರಸನ್ವೆಂಕಟಕೃಷ್ಣ ಜೀವರಿಗೆ |
ಸರಿಯೆಂದವನು ಇಹಪರಕೆ ಬಾಹಿರನು || ||೧||

### ತ್ರಿಪುಟತಾಳ

ಹರಿಯಂಘ್ರಿಮೂಲದಾಸತ್ವವ ಹೊಂದಿ |
ಪರಮ ಮಂಗಳ ನಾಮಸ್ಮರಣೆಯನ್ನು ಬಿಡದೆ |
ಇರಲೆನ್ನ ಮನವು ಇರಲೆನ್ನ ತನುವು |
ನಿರುಪಾಧಿಕ ಪ್ರಿಯ ನಿರ್ಮಲ ಶ್ರುತಿಗೇಯ |
ನಿರುತ ಪ್ರಸನ್ವೆಂಕಟ ಸೇವೆಯಲಿರಲಿ || ||೨||

## ಮೂಲರಾಮದೇವರ ಮಹಿಮೆಯ ಸುಳಾದಿ

### ಧ್ರುವತಾಳ

ರಾಮ ರಘುಕುಲ ಸಾರ್ವಭೌಮ ಪೂರಣಕಾಮಾ
ಜೀಮೂತಾ ಶ್ರೀಮೂಲರಾಮಾ ||
ಕೋಮಲ ಶರೀರ | ಸೀತಾಮುಖಾಂಬುಜಭ್ರಮರ |
ಪ್ರೇಮಸಾಗರ ಭಕ್ತಜನಮನೋಹರಾ |
ಸಾಮಜಾರಾತಿಹರ | ಸಾಮಗಾನಾದರ ನಿಸ್ಸೀಮ
ಗುಣಗಂಭೀರಾ ಏಕವೀರಾ |
ಸ್ವಾಮಿ ಮಠದರಸಾ | ಮುನಿಸ್ತೋಮ ಮಾನಸಹಂಸಾ |
ನೀ ಮನ್ನಿಸು ಪ್ರಸನ್ವೆಂಕಟಾದ್ರೀಶಾ ರಘುರಾಮಾ || ೩ ||

### ತ್ರಿಪುಟತಾಳ

ನಿರುತ ವೈಕುಂಠ ಮಂದಿರವಿದ್ದು ಪರ್ಣಕು- |
ಟೀರವಾಶ್ರೈಸುವಾ ಘನತೆ ಎತ್ತ ||
ವರಪೀತಾಂಬರದಾ ಮೋಹವಾ ಬಿಟ್ಟು ವಲ್ಕಲಾ |
ಧರಿಸಿ ಕಾನನದಿ ಸಂಚರಿಪೋದೆತ್ತ ||
ನರಲೀಲೆಗಿದು ಶ್ಲಾಘ್ಯವೆಂದು ತೋರಿದೆ ಜಗ- |
ಧೊರಿಯೆ ಪ್ರಸನ್ವೆಂಕಟಾದ್ರಿ ರಘುರಾಮಾ || ೪ ||

## ಹರಿಯ ಮೇಲಿನ ಸುಳಾದಿ

### ತ್ರಿಪುಟತಾಳ

ಪ್ರಕೃತಿಯಿಂ ಬದ್ಧ ನಾ | ಪ್ರಕೃತಿಯಾಳುವೆ ನೀನು |
ಪುರುಷಾಧೀನ ನಾನು | ಪುರುಷರ ಪ್ರಭು ನೀನು |
ಸಕಲ ಸ್ವಾತಂತ್ರ ಸ- | ದ್ಭಕುತರಾಧೀನನೇ |
ನಿಖಿಳ ಸಂದೇಹಧ್ವಾಂತಕ್ಷಧಿಕ ಪ್ರಸನ್ವೆಂಕಟೇಶ || ೫ ||

ಶ್ರೀನಾಥ ನಿನ್ನ ಮರೆದೆನಾಗಿ ಎಂಭ- |
ತ್ತುನಾಲ್ಕುಲಕ್ಷ ಗರ್ಭದ ದುರ್ಗದಿ ಸಿಲುಕಿ |
ಯೋನಿಯಂತ್ರದಿ ಕೆಟ್ಟು ನೊಂದೆ |
ಹೀನವಿಷಯಭೋಗ ಸಾಕೆನಲೊಲ್ಲದೆ |
ಆನಾರಿ ಸಾರೆ ಮನ ಮಾರಬಾಧೆಗೆ
ದೀನನಾಥ ಪ್ರಸನ್ನವೆಂಕಟಕೃಷ್ಣ || ೬ ||

## ಹೆಣಗಿದರಾಗದು ಒಣ ತರ್ಕದಲಿ

ರಾಗ-ಯಮುನ ತಾಳ-ಆದಿ (ತೀನ್ ತಾಲ)

ಹೆಣಗಿದರಾಗದು ಒಣತರ್ಕದಲಿ |
ದಣಿದರೆ ಕೂಡದು ಭಕುತಿ |
ವನಜಾಕ್ಷನ ಕೃಪೆ ಮನಸಾಕ್ಷ್ಯಾದರೆ |
ತನ್ನಿಂತಾನಾಗುವದು ಮುಕುತಿ || ಪ ||

ಸೂಕ್ಷುಮ ತತ್ವದಿ ಅದಕ್ಷನು | ದೀಕ್ಷಿತನಾದರೇನು |
ಅಕ್ಷರ ಬರದಿಹ ಕುಕ್ಷಿಯು ವೃಥ ಗುರು- |
ಶಿಕ್ಷಿಲ್ಲದ ಜನುಮೇನು | ಭಿಕ್ಷುಕ ಧಾನ್ಯಾದ ಲಕ್ಷಿಯಲಿ ಪದು- |
ಮಾಕ್ಷನ ಹೊಗಳಿದರೇನು| ಕುಕ್ಷಿಯ ಲಾಭವು ಅಕ್ಷಯ ತೋಷದ|
ಮೋಕ್ಷೋಪಾಯವಿದೇನು ಬರಿದೆ || ೧ ||

ದ್ರವ್ಯಾದಿ ಪ್ರಯ ಹವ್ಯಾದಿ ಕ್ರಮ |
ಅವ್ಯಯ ಜೀವ ಸ್ವಭಾವಾಖ್ಯಾ |
ಕಾವ್ಯರಚನೆ ಶಬ್ದ ವ್ಯಾಕರಣದ | ಹವ್ಯಾಸವು ಇಹಸೌಖ್ಯ |

ಅವ್ಯಾಕೃತನಾಮಾ ವ್ಯವಹರಿಲ್ಲದ್ಯ । ನವ್ಯಕಥಾ ಜನಸಖ್ಯಾ ।
ದಿವ್ಯ ಮೂರುತಿ ವೇದವ್ಯಾಸಜ ಭವ– ।
ಸೇವ್ಯನ ನಿಷ್ಠೆಯೆ ಮುಖ್ಯ ॥ ೨ ॥

ಕಡು ಆದರದೊಳು । ಕಡಲೊಡೆಯನ ಪದ– ।
ವಿಡಿಯದವನ ಶ್ರುತಿಶಾಸ್ತ್ರ ।
ನಡುಹೊಳೆ ದಾಟುತ ತಡೆಯಲಿ ನಾವೆಯು ।
ಬುಡುಮೇಲಾದಂತೆ ವ್ಯರ್ಥ ।
ದೃಢ ಪ್ರಸನ್ವೆಂಕಟ ಒಡೆಯನಾಜ್ಞೆಯನ್ನ ದಯ ।
ಪಡೆದನು ಗುರುಸಖ ತೀರ್ಥಾ । ನುಡಿಗಳ ಮಾಲೆಯ ।
ತುಡುಗರಾ ತಮಸಕೆ ಬಡಿದಟ್ಟುವನು ಸಮರ್ಥಾ ॥ ೩ ॥

## ಜಯ ಭೋ ಜಯ ಭೋ ಜಯ ವೆಂಕಟೇಶ ಪ್ರಭೋ

ರಾಗ–ಶಂಕರಾಭರಣ (ಭೈರವಿ) ತಾಳ–ಝಂಪಾ (ದೀಪಚಂದಿ)

ಜಯ ಭೋ ಜಯ ಭೋ ಜಯ ವೆಂಕಟೇಶ ಪ್ರಭೋ ।
ಜಯಕರ್ತಾ ಭಯಹರ್ತಾಭಯದಾಯಕ ಮೂರ್ತೇ ॥ ಪ ॥

ಫಣಿಗಿರಿವರ ಫಣಮಂದಿರ ಪ್ರಣತ ಮನೋಹರ ।
ಘನ ಸದ್ಗುಣಗಣಪೂರ್ಣ ಘನಶಾಮಲವರ್ಣ ॥
ಮನಮಾನಸ ಮುನಿತಾಪಸ ಮನೋಮಾನಸಹಂಸ ।
ದನುಸುತಹರ ಧನುಸಂಹರ ದಿನಮಣೀಶ ರುಚಿರ ॥ ೧ ॥

ವನಜಾಕ್ಷಾವನೀಜಾಂತಕ ವನಜಾಸನ ಜನಕ ।
ಕನಕಾಕ್ಷಹ ಕನಕಾಲಯ ಕನಕಸ್ತ್ರೀ ಪ್ರೀಯಾ ॥
ವನಭ್ರಮಣಾವನಿರಮಣಾ ವಿನತಾತ್ಮಜ ಗಮನಾ ।
ಅನಿಮಿತ್ತಜ ಅನಸೂಯಜ ಅನಿಮಿಷ ಇಂದ್ರನುಜಾ ॥ ೨ ॥

ಅರಿದರಧರ ಅರಿಪರಿಹರ ಅರುಣಾಂಬರಧರ |
ಚಿರಮಣಿ ರುಚಿರಾಭರಣನು ಚರಸುರತರು ವೀರ ||
ಸುರಪರಮಾಪ್ತನೇ ಸಾಸಿರ ಕ್ರೀಡಾಶ್ಚರ್ಯಾಗಾರಾ |
ಕಲಿ ಕುಲುಷರ ಕರುಣಾಕರ ಪ್ರಸನ್ವೆಂಕಟೇಶ್ವರ || ೩ ||

## ಉಗಾಭೋಗ

### ನಿನ್ನ ಮಹಿಮೆಯನಾರು ಬಲ್ಲರು

ರಾಗ-ಬಹರಿ ತಾಳ-ಬಿಲಂದಿ

ನಿನ್ನ ಮಹಿಮೆಯನಾರು ಬಲ್ಲರು |
ಚಿನ್ಮಯಾತ್ಮಕನಂತರೂಪನೆ ||
ಮುನ್ನೆ ಕಮಲಜ ನಿನ್ನ ನಾಭಿಯೊಳುನ್ನತೋನ್ನತದಿ |
ಘನ್ನ ತಪವಂಗೈದು ಕಾಣನು ||
ಇನ್ನು ಸ್ಮೃತಿ ಅರಸಿ ಅರಿಯುವು |
ಪನ್ನಗೇಂದ್ರನು ಪೊಗಳಲರಿಯ ಪ್ರಸನ್ವೆಂಕಟನೆ || ೧ ||

ಹರಿಯೇ ತ್ರಿದಶರ ಧೊರೆಯೆ ಭಕುತರ |
ಸಿರಿಯೇ ದಿತಿಜಾರರಿಯ್ಯೋ ನವರತ ||
ಮರೆಯದಿಹ ಅಜಹರಯತೀಶ್ವರರರಿಯರಿನ್ನುಳಿದ ||
ಇರವು ಮನುಜ ನಾ ಕರಿಯಾಲಾಪಿಸೆ |
ಪೊರಿಯೊ ಬಿಡದೆ ಪ್ರಸನ್ನವೆಂಕಟ |
ಗಿರಿಯರಸೆ ಜಗಧೊರೆಯೆ ಸುರವರವರಿಯ ಮಾಸಹನೇ || ೨ ||

ನಾಗರಿಪುಗಮ ನಾಗಭೃತ ಶುಭ |
ನಾಗಪಕ್ಷಘನಾಗಮ ನಿಗಮ |
ನಾಗಪತಿವದನೈಕಸ್ತುತ ಸುಗುಣ ಗುಣಾರ್ಣವನೆ ||

ನಾಗಹರಸಖ ನಾಗಗನ ಮಣಿ |
ನಾಗಗ್ರಸಿತಭಾ ನಾಗದ್ವಿಟ ಮುಖ |
ನಾಗಧರಸುತನಾಗಮದಹ ಪ್ರಸನ್ವೆಂಕಟೇಶಾ || ೩ ||

## ನಿನ್ನಹಂಬಲ

ಸಲೆ ಸಲ್ಲಾ ನವ ಸಭೆ ಸಲ್ಲಾ |
ಬಲಿಮದಹೃತ ನಿನ್ನೊಲುಮಿಯರೋಳ್ಬಳ ಸಲೆ ಸಲ್ಲಾ ||
ಹೊಂಬಾಳೆಂದೊಡಲಿಂಬುಗೊಡಲು ಬಲು |
ಸಂಭ್ರಮುವಕ್ಕುದೆ ಲಕುಮೀಶಾ ||
ನಂಬಿಗೆ ಇಲ್ಲದಗಿಂಬಿಲ್ಲೆಂದಿಗೆ |
ಡಂಬರ ವ್ರತ ವ್ಯಥ ಲಕುಮೀಶಾ ||
ಕುಂಭಿಣಿಗುಬ್ಬಸನೆಂಬರು ಹರಿಪಾ- |
ದಾಂಬುಜ ವಿಮುಖಗೆ ಲಕುಮೀಶಾ ||
ಶಂಭುಪ್ರಸನ್ವೆಂಕಟಾಂಬುಧಿಶಾಯಿ ನಿ- |
ನ್ನಂಬಲವಿಲ್ಲದ ಕುನರನ.... || ೧ ||

## ನವಭಕ್ತಿ

ಹಱಿಯ ಒಂಭತ್ತು ಭಕುತಿ ಬಲ್ಲ ಧೀರಾ |
ಮಱಳಿ ಸಂಸೃತಿಯಲಿ ಹುಟ್ಟ ಬಾರ |
ದುರಿತ ದುಷ್ಕೃತಿಗಳ ಕಂಡು ಸೇರ |
ಹಿಱಿಯರೊಳ್ಪಿಱಿನುಡಿ ಜಿಹ್ವೆಗೆ ತಾರ |
ಪ್ರಸನ್ವೆಂಕಟಗಿರಿಯ ಉದಾರನ |
ಚರಣಾಬ್ಜಸಿಷ್ಟಿ ಅಂಗಡಿ ಇಟ್ಟು ತೋರ || ೨ ||

ಹರಿಕಥಾ ಶ್ರವಣಕ್ಕೆ ಮನಸಿಟ್ಟ ಪ್ರೌಢ |
ಅರವತ್ತು ಘಳಿಗೆಯು ವ್ಯರ್ಥ ಹೋಗಗೊಡ |
ಪರಮ ಪದವಿಗೆ ಯೋಗ್ಯನವನೇ ಗಡ |
ನರಕದ ಬಟ್ಟೆಯು ದೂರದಲ್ಲ್ಯೊ ನೋಡ |
ಪ್ರಸನ್ನ ವೆಂಕಟಪತಿಯಂಘ್ರಿ ಗಾಥ |
ತರದಲಪ್ಪುತ ಮೈಯುಮರೆದು ಮಾತಾಡ || ೩ ||

ಹರಿನಾಮ ಕೀರ್ತನೆಯ ಭಕುತಿ ತುಂಬಿ ಪೇಳ್ವ |
ಸರಸ ಭಾವದಲೆ ಕಣ್ಣೊರತಿಯನು ತಾಳ್ವ |
ಹರುಷಾಮೃತಾಬ್ಧಿಯಲಿ ಮುಳುಗಿ ಮುಳುಗಿ ಏಳ್ವ |
ದುರಿತಗಜದ ಮಂಡಿಯನು ಹೊಡೆದು ಸೀಳ್ವ |
ಹರಿಯಂತೆ ಕೂಗಿ ಸಜ್ಜನರೊಳಗೆ ಬಾಳ್ವ |
ಪ್ರಸನ್ನವೆಂಕಟ ಭಟಗೆ ಮನ ಒಲಿವ || ೪ ||

ಹರಿಸ್ಮರಣೆಗೆ ವಿಸ್ಮೃತಿಯನವ ಜರಿದ |
ಚಿರಕಾಲದಘವನೊಮ್ಮೆಂದೊಮ್ಮೆಲೆ ತರಿದ |
ಪರಮ ಭಾಗವತರ ಸಮ್ಮೇಳನವ ಬೆರೆದ |
ನೆರೆ ಹಿತಕರಿಗೆಲ್ಲ ಮುಕುತೀಗೆ ಕರೆದ |
ವರಬಿಂಬ ಕಾಂಬುವ ಕಂಗಳ ತೆರೆದ |
ಪ್ರಸನ್ನ ವೆಂಕಟೇಶನ ಹೊಂದಿ ಮೆರೆದ || ೫ ||

ಹರಿಪಾದ ಸೇವನ ಧ್ಯಾನ ಬಲ್ಲಿದನ್ನ |
ವರಪುಟವಿಟ್ಟ ಚಿನ್ನದಿ ಮೊಗಬಣ್ಣ |
ದುರಿಚ್ಛೆಯಿಂದ ದುರ್ವಿಷಯಕೆ ಎತ್ತ ಕಣ್ಣ |
ಹರಿಗುರುಗಳಲ್ಲದೆ ಶರಣೆನ್ನ |
ಪ್ರಸನ್ನ ವೆಂಕಟಪತಿಯ ಪಾವನ್ನ |
ಚರಣಾಬ್ಜ ರಸಂ ಈಂಟಿ ಮೊಲೆವಾಲನುಣ್ಣ || ೬ ||

**ಹರಿಯೊರ್ಚನೆಯಂ** ಭಕುತಿಯ ಪ್ರವೀಣ |
ತರತರದಿ ಬರುವೆಡರನು ಒಮ್ಮೆ ಕಾಣ |
ಹರಿಗೆ ದೇಹೇಂದ್ರಿಯನರ್ಪಿಸಿ ಪ್ರಾಣ |
ಹರಿಪುರದಲ್ಲಿ ಮಾಡಿದನು ತನ್ನ ತಾಣ |
ಪ್ರಸನ್ನ ವೆಂಕಟಪತಿಯ ಪೂಜಾ ತ್ರಾಣ- |
ವರಿತವ ಕಾಯದೊಳಿದ್ದು ನಿರ್ಗುಣ || ೭ ||

**ಹರಿಭಕ್ತಿಲ್ಯಷ್ಟಾಂಗ** ಪುಟಪಿಟ್ಟು ನಿಚ್ಚಾ |
ಉರು ಪಾಪಾಟವಿಗೆ ಘಮ್ಮನೆ ಇಟ್ಟ ಕಿಚ್ಚಾ |
ಸುರಲೋಕ ಮುಂತಾದ ಸಿರಿಗೆ ಅವ ಮೆಚ್ಚ |
ನರರ ಸಂಪದವೆಲ್ಲಾ ಸ್ಥಿರವೆಂದು ನೆಚ್ಚಾ |
ಪ್ರಸನ್ನವೆಂಕಟನ ನಂಬಿದ ಹುಚ್ಚಾ |
ನಿರಯದಾರಿಗೆ ಎಂದೂ ಬೆದರನು ಬೆಚ್ಚಾ || ೮ ||

**ಹರಿಯಂದಾಸರ ದಾಸ ದಾಸತ್ವ** ಪಡೆದಾ |
ಹರಿ ನಂಬದವನೆದೆಮೆಟ್ಟಿ ತಾ ನಡೆದಾ |
ಹರಿಯ ಬಂಟರ ಬಾಕುಳಿಯ ವೃತ್ತಿ ಹಿಡಿದಾ |
ಪ್ರಸನ್ನವೆಂಕಟರಮಣನ ಎಡದಾ- |
ಚರಣ ನಿರ್ಜರ ತರುಛಾಯವವಿಡಿದಾ || ೯ ||

**ಹರಿಯಲ್ಲಿ ಭಕುತಿಯ** ಗೆಳೆತನವಿಟ್ಟಾ |
ತರುಣಿ ಸ್ವಪ್ರಜ ಸಂಪದಗಳ ಸ್ನೇಹಬಿಟ್ಟಾ |
ಕರ್ಮತ್ರಯಂಗಳೆಲ್ಲವ ಹಿಂಡಕಿಟ್ಟಾ |
ತಿರುಗಿ ಬರುವ ಊರ ಬಟ್ಟೆಯ ಬಿಟ್ಟಾ |
ಪ್ರಸನ್ನವೆಂಕಟನಲಿ ಚಿತ್ತ ವಿಟ್ಟಾ |
ನರಸಿಂಹನೊಲಿಸಿ ಲಿಂಗಾಂಗವ ಸುಟ್ಟಾ || ೧೦ ||

ಹರಿಗೆ ತನ್ನಾತ್ಮ ನೀವೇದನದಿಂದಾ ।
ಉರಿ ಜಲ ಮಣ್ಣು ಬಯಲು ಗಾಳಿ ಹೊಂದಾ- ।
ಸ್ವರೂಪನೆ ಹರಿಯಂಘ್ರಿಗರ್ಪಿಸಿ ನಿಂದಾ ।
ಹರುಷವನುಂಬ ಉನ್ನಾಹದಿಂದಾ ।
ಪ್ರಸನ್ನವೆಂಕಟಪತಿ ಭಕ್ತಿಯಿಂದಾ ।
ಸುರ ಋಷಿ ನರರಿಗೆಲ್ಲಾ ನಿಜಾನಂದಾ ॥ ೧೧ ॥

ಹರಿಕಥಾಶ್ರವಣ ಹರಿನಾಮ ಸಂಕೀರ್ತನೆ ।
ಹರಿಸ್ಮರಣೆ ಹರಿಪಾದ ಸರ್ವದಾ ಸೇವನೆ ।
ಹರಿಪೂಜೆ ತನುಮನದಾಸ್ಯ ಸಖತ್ವ ।
ಹರಿಗಾತ್ಮಾರ್ಪಣೆ ಮುಕುತಿಯ ಪಥತ್ವ ।
ಪ್ರಸನ್ನವೆಂಕಟ ಪರಬೊಮ್ಮ ಸಿದ್ಧ ।
ಗುರುಮತ ಶ್ರುತಿ ಸ್ಮೃತಿಯೊಳಿದೇ ಸುಪ್ರಸಿದ್ಧ ॥ ೧೨ ॥

## ಜಾಣೆ ಗೋಪೇರೊಂದುಗೂಡಿ

( ವೇಣುಗೀತಾ )

ರಾಗ–ದೇಶಿ (ಭೈರವಿ) ಅಟತಾಳ (ದಾದರಾ)

ಜಾಣೆ ಗೋಪೆರೊಂದುಗೂಡಿ
ವೇಣುಗೋಪತಿಯ ದಿವ್ಯ
ವೇಣುಗೀತೆಯ ಹೇಳಿದರೆ । ಗಾನರಸದಲಿ ॥ ಪ ॥

ಜ್ಞಾನಚರ್ಯನಂದನ್ನ । ರಾಣಿ ಕೇಳಿದಳೆಂದು ವ್ಯಾಸ- ।
ಸೂನು ಪೇಳ್ದ ಭೂಪತಿಗೆ । ಆನಂದದಲಿ ॥ ಅ.ಪ ॥

ನಂದನೋದ್ಯಾನಕಧಿಕಾ- । ನಂದವಿದ ವನಗಳಲ್ಲಿ ।
ಬಂದು ಕೃಷ್ಣ ಚರಿಸುವ ಗೋ- । ವೃಂದದಿ ನಿತ್ಯ ।
ಇಂದುಮುಖಿಯರು ಪ್ರಿಯನ ನೋಡಿ । ಕಂದರ್ಪನ ಸಾಯಕಕ್ಕೆ ।
ನೊಂದು ವೇಣುವೈಚಿತ್ರ್ಯದ । ಚಂದ ಹೊಗಳುತ್ತ ॥ ೧ ॥

ವಾಮಬಾಹ್ವಿಲಿಟ್ಟು ಗೋಣು । ವಾಮಕಪೋಲವು ಭ್ರೂ- ।
ಭ್ರಮಣ ವಿಲಾಸಾರ್ಪಿತ । ಹೇಮ ವೇಣುವ ॥
ಕೋಮಲಾಂಗುಲಿಲಿರಾಗ- । ನೇಮಿಸೆ ಮಂಜುಳಸ್ವನಾ ।
ಕಾಮಿನೇರು ಕೇಳುತಲಿ । ಕಾಮಬಾಣದಿ ॥ ೨ ॥

ವ್ಯಾಮೋಹಿಪಂತೆ ಮಾಡಿದ । ಶ್ರೀಮುಕುಂದಾಂಬರದಲಿಹ ।
ವೈಮಾನಿಕ ಸಿದ್ಧಪತ್ನೇರ್ । ಭ್ರಾಮೆಗೊಂಡರು ॥
ಕಾಮಬಾಣ ನಟ್ಟು ಲಜ್ಜೆ- । ಯಾ ಮರೆದು ಜಗುಳಿಬಿದ್ದ ।
ಹೇಮಾಂಬರಾಭರಣಗಳ । ನೇಮಗಾಣರು ॥ ೩ ॥

ಕೇಳಿರಿ ಸ್ತ್ರೀಜನರುಗಳಿರಾ | ಮಾಲೆ ಮಿಂಚಿನ ಚಲುವ |
ನೀಲನೀರದಶಾಮಲನ | ಲೀಲೆ ವೇಣುವಿನ ||
ಮೇಲುನಾದ ಕೇಳಿ ಮಾತ್ರ | ಬಾಲೇರಿಗೆ ಮೋಕ್ಷಾನಂದ |
ಕಾಲಕಾಲ ಕುಣಿಸುವ | ಗೋಪಾಲನಂದನ || ೪ ||

ಆವ ವಿಚಿತ್ರ ರಾಗವೋ | ಆವ ಮೋಹನ ಕರವೋ |
ದೇವಗಾಯಕೀಯರೆಲ್ಲಾ | ಕೋವಿದ ರಾಣಿ ||
ಗೋವು ಮೃಗಾಳಿಗಳೆಲ್ಲ | ಭಾವಶುದ್ಧಿಯಿಂದ ಕೇಳಿ |
ದೇವೇಶನ ಪದದಿ ತಮ್ಮ | ಜೀವನೀಡಲು || ೫ ||

ಹಿಂಡುಗೋವು ಹರಿಯ ಕೃತಿಯ | ಕಂಡು ಧ್ಯಾನದಲ್ಲಿ ತಂದು |
ತುಂಡ ನೆಗಹಿ ಬಾಲವೆತ್ತಿ- | ಕೊಂಡು ನಿಂತವು |
ತಂಡತಂಡ ಒಪ್ಪಿದವು | ಹಂಡೆ ಹವಳೆ ಹುಲ್ಲುಗಚ್ಚಿ- |
ಕೊಂಡು ನಿಂತವಲ್ಲಿಗಲ್ಲಿ | ಮೆಂಡಲಿದ್ದವು || ೬ ||

ಕರ್ಣ ನಿಲ್ಲಿಸಿ ಎವೆಯನಿಡದೆ | ಸ್ವರ್ಣ ವೇಣುವಿನ ರವ- |
ಮನ್ನಿಸಿ ಮುಕುಂದನಲ್ಲಿ | ಮನವನಿಟ್ಟವು ||
ಘನ್ನ ನಿದ್ರೆಯಾಯ್ತು ಬದಿಯ | ತನ್ನ ಕರುವ ನೋಡಲಿಲ್ಲ |
ಬಣ್ಣವಿಟ್ಟು ಬರೆದ ಚಿತ್ರ- | ವನ್ನು ಹೋಲ್ವವು || ೭ ||

ಪೂಗೊಂಚಲು ಬರುಹಿ ಬರ್ಹ | ಗೋಗೋವರ್ಗ ಕೊಟ್ಟು ಮುಡಿದು |
ತಾ ಗೈರಿಕ ಲೇಖಿಸಿಕೊಂ- | ಡಾಗ ಎಲ್ಲರ ||
ಸೋಗನಾಂತು ಒಪ್ಪಿದರು | ಪೂಗಣೇಶನಂತ ತೇಜ |
ಯೋಗಿಜನಹೃದಯಾ ನಿಲಯಾ- | ಮೋಘಸುಂದರ || ೮ ||

ಪ್ರೇಮದಿಂದ ಕರೆವನಾವ | ಗೋಮಕ್ಕಳ ಸಂದೋಹದಿ |
ರಾಮನೊಡನೆ ವೇಣು ಸ್ವರದಿ | ಸ್ವಾಮಿ ಅಚ್ಯುತ |
ಹೈಮವಂಶನಾದ ಸುಧೆಗೆ | ಆ ಮಹಾನದೀಗಳೆಲ್ಲ |
ತಾ ಮುಂದಕ್ಕೆ ಪ್ರವಹದೋರವು | ವ್ಯಾಮೋಹಿಸುತ || ೯ ||

ತಾ ಮತ್ತೆ ಹಿಂದಕ್ಕೆ ಬಂದು । ಸೋಮಕುಲಪನಂಘ್ರಿಗಳನು ।
ಆ ಮಹಾ ಭುಜೋರ್ಮಿಗಳಲಿ । ಕಾಮಿಸ್ಯೊಪ್ಪಿದುವು ॥
ಈ ಮಹಿಮೆ ನೋಡಿ ಸುರರ- । ಸ್ತೋಮ ಸಿದ್ಧಗಂಧರ್ವರು ।
ವ್ಯೋಮಮಂಡಲದಿ ನಮೋ । ನಮೋಯೆಂದರು ॥ ೧೦ ॥

ಆದಿಪುರುಷ ಸ್ಥಿರೈಶ್ವರ್ಯ- । ನಾವ ದೇವ ವನಗಿರಿಯಲಿ ।
ಊದಿದ ಷಡ್ರಸದ ವೇಣು । ಗೋಧನದ ರಕ್ಷ ॥
ವೇದಾನಂತಾವೇದ್ಯ ಕೃಷ್ಣ । ಮಾಧವ ಮುಕ್ತಾರ್ಥಿ ತಾ ಶ್ರೀ- ।
ಪಾದಪದ್ಮಾಮೋದ ಪ್ರ- । ಮೋದ ಸುಪಕ್ಷ ॥ ೧೧ ॥

ಅಪವರ್ಗ್ಯರಿಂದ ಸ್ತೋತ್ರ । ಶ್ರೀಪತಿ ಮಾಡಿಸಿಕೊಂಬ ।
ಗೋಪರ ಸ್ತೋತ್ರಕೊಪ್ಪಿದ । ಶ್ರೀಪರಬ್ರಹ್ಮ ॥
ಶ್ರೀಪ್ರಕೃತಿ ಇವನ ಗುಣ- । ರೂಪ ಲಾವಣ್ಯಕ್ಕೆ ಸೋತಾ- ।
ಳೀ ಪೆಣ್ಗಳಿಗೆ ವಶವಿಡಂಬನ । ತೋರ್ಪನಮ್ಮಮ್ಮ ॥ ೧೨ ॥

ಈ ವನದ ತರುಲತೆಯು । ಶ್ರೀವಿಷ್ಣುವಶವಾದವೆಂಬ ।
ಭಾವ ತೋರಿ ನಮಿಸಿದವು । ಪೂವು ಫಲದಿಂದ ॥
ತೀವಿದ ತೋಷದಿ । ವೇಣು- । ರವರಸವನುಂಡು ಕೊಬ್ಬಿ- ।
ದಾವು ತಲೆದೂಗಿದವು । ಕೋವಿದರಂತೆ ॥ ೧೩ ॥

ಪ್ರೇಮಹರುಷದಶ್ರುಧಾರಾ । ಆ ಮರಂಗಳ್ವಿಟಪಸಾರಾ ।
ಭೂಮಿಗಿಳಿವಾಶ್ಚರ್ಯ ನೋಡಿ । ಕಾಮಿನೇರೆಲ್ಲ ॥
ಶ್ರೀಮನೋಹರನ ಕೀರ್ತಿ । ಧೀಮಂತ ಜನರೆ ಸ್ಫೂರ್ತಿ ॥
ಪಾಮರರೇನು ಬಲ್ಲರು । ಈ ಮಹಾಲೀಲೆ ॥ ೧೪ ॥

ಕೆಳದಿ ಕೇಳೆ ಗಂಧನೀಲೋ- । ತ್ಪಲದಾಮೋದಮಯದ ವಕ್ಷಾ- ।
ಸಿಲವನುಂಡು ಸೊಕ್ಕಿ ಚರಿಪ । ಅಳಿವಿಂಡುಗಳು ।
ಅಲಘುಗಾನ ಕೇಳಿ ಮುಕುಂದ । ತಲೆದೂಗಲು ರಂಹಸದಿ ।
ನಳಿನಾಕ್ಷನ ಬಳಿಗೆ ಬರಲು । ಸಾರಸಹಂಸಗಳು ॥ ೧೫ ॥

ಲಲಿತವೇಣು ಸುಧೆಯನುಂಡು । ಕಲವೇರಿ ಕೂಲದೆ ಮೌನದಿ ।
ಬಳಿಯಲ್ಯರಗಣ್ಣ ಮುಚ್ಚಿ । ನಳಿನ ನಯನನ್ಯ॥
ಚಲುವಿಕೆ ಧ್ಯಾನೋಪಾಸನೆ- । ಗಳಲಿ ಪರಮಹಂಸರಂತೆ ।
ನಲಿವ ಸಾರಸ ಹಂಸಗಳ । ಬಳಗವನುದಿನ ॥ ೧೬ ॥

ಅಣ್ಣ ಗೋವರಿಂದ ಕೂಡಿ । ಚಿನ್ಮಯಾಧರದಿ ವೇಣು- ।
ವನ್ನೂದುವ ಹೆಸರುಗೊಂಡು । ಕನ್ಯೆ ಗೋಪೆಯರ ॥
ತನ್ನಾನಂದದಿ ತಾ ಪೂರ್ಣ । ಜನರ ವಿಡಂಬ ನಟನೆ- ।
ಯನ್ನು ತೋರ್ವ ಅಜ್ಞರ ಮೋ- । ಹನ ಸುಂದರ ॥ ೧೭ ॥

ಘನ ಮಂಜುಳರವದಿ ಗೋವ- । ರ್ಧನ ಗಿರಿಯು ಶಬ್ದಿಸಲು ।
ಘನಗಂಜಿ ಮೆಲ್ಲಮೆಲ್ಲನೆ । ಸ್ವ-ನಿವಾಸ್ಯೆದಿದವು ॥
ಘನಶಾಮಲ ನಮಗೆ ಬಂಧು । ತನುಮನದಿ ಅವಗೆ ಸ್ತೋತ್ರ- ।
ವನು ಮಾಡುವೆವೆಂಬ ಭಯದಿ । ಹೆಣಗಿ ನಿಂದುವು ॥ ೧೮ ॥

ಮಹದತಿಕ್ರಮಣಕಂಜಿ । ಮಹ ಪೂಜೆಯಲಿ ಒಲಿಸುವಂದದಿ ।
ಆಹಸ್ಸಿನಲ್ಲಿ ಪುಷ್ಪವೃಷ್ಟಿ । ಬಹಳಗರೆದವು ॥
ಮಹಿಯೊಳಗೆ ಹರಿಯ ಆಜ್ಞೆ । ವಹಿಸಿದವನಿಗೇವೆ ಮುಕ್ತಿ ।
ವಹಿಸದವನೇ ದ್ರೋಹಿಯವಗೆ । ಸಹಜಾಂಧಂತಮವು ॥ ೧೯ ॥

ಶಶಿವದನೆ ನಿನ್ನ ಸೂನು । ಕುಶಲವರ್ಯ ಗೋವರೊಳು ।
ಅಸಮವೇಣುವಿಂದ ಸ- । ದ್ರಸದಿ ಗಾಯನವ ॥
ಹೊಸಹೊಸ ಸುಮಧುರ ಗೀತಾ । ಎಸೆವ ಬಿಂಬಾಧರದಿ ಇಟ್ಟು ।
ಶಿಶುಗೆಳೆಯರ ಶಿಕ್ಷಿಪಾ । ವಂಶಗಾಯನವ ॥ ೨೦ ॥

ದಿವಿಯಲಿ ನೆರೆದ ಸರಸಿಜೋ- । ದ್ಭವ ಭವೇಂದ್ರ ಮುಖ್ಯರಾವ ।
ಕವಿಗಳಾನತಕಂಧರದಿ । ಕಿವಿಯಗೊಟ್ಟರು ॥
ಕವಿದು ಮೋಹವಿಸ್ಮಿತದಲಿ । ನವೆಯದ ಶ್ರೀಹರಿಯ ಲೀಲೆ ।
ಸವಿರಸವ ಸವಿದಾನಂದ । ಭವನವಿಡಿದರು ॥ ೨೧ ॥

ಗೋಖುರಾರ್ದಿತ ಗೋಷ್ಠ ಭೂಮಿ | ಶ್ರೀ ಕಂಜಾಂಕುಶವಜ್ರಧ್ವಜ
ರೇಖಾಂಕಿತ ಶ್ರೀಪಾದಾಬ್ಜ | ಸೋಂಕಿ ಒಪ್ಪಲು ||
ನಾಕದವರು ವ್ರಜದವಾಸ | ಬೇಕೆಂದು ಬಯಸಿದರಲ್ಲಿ |
ಶ್ರೀಕೃಷ್ಣಾಂಘ್ರಿಯಾಶ್ರಿತರ್ಗೆ |ವೈಕುಂಠವ್ಯಾಕೆ || ೨೨

ಶ್ರೀರಮಣ ಸೌಂದರ್ಯ | ಸಾರನ್ನ ಮಾರ್ಗದಿ ಕಂಡು |
ಸಾರಂಗಾಕ್ಷೇರಾಪಿಲಾಸಕೆ | ಮೇರೆದೋರದು ||
ಸ್ವರವೇಣುರಸಾಯನಕ್ಕೆ | ನಾರೇರಿಚ್ಚೆ ಹಬ್ಬಲಾಗೆ |
ಮಾರನ ಮಾರ್ಗಣರಾಶಿ | ತೂರುತಿದ್ದವು || ೨೩ |

ತನು-ಮನೆಯ ಮರೆದರವರು | ಕನಕಾಭದಂಬರ ಜಗುಳಿರೆ |
ಇನಿತು ಎಚ್ಚರಿಲ್ಲವರ್ಗೆ | ಮುನಿಗಳಂದದಲಿ ||
ಮಣಿಧರ ಗೋವು ಮೇಸುತೊಮ್ಮೆ | ಗೆಣೆಯರಂಸದಿ ಸ್ಕಂದವಿಟ್ಟು
ಕ್ವಣಿತ ಮೇಣು ನುಡಿಸಿ ಮೋಹಿಪ | ವನದಿ ವನಮಾಲಿ || ೨೪ |

ಕೃಷ್ಣಸಾರಸತಿಯರ್ತಮ್ಮ | ಪುಟ್ಟ ಮರಿಗಳ ಮನೆಯ ಬಿಟ್ಟು- |
ಕೊಟ್ಟಚ್ಯುತನ ರೂಪವನ್ನು | ದಿಟ್ಟಿಸಿದವು ||
ಕೃಷ್ಣನ ಲಾವಣ್ಯಾಮೃತವ | ಗುಟುಕರಿಸಿ ಕಂಗಳಿಂದ |
ಗೋಷ್ಠನಾರಿಯರನ್ನು ಪೋಲ್ದು | ತುಷ್ಟಿಸಿದವು || ೨೫ |

ಕುಂದಕುಸುಮ ಮಾಲೆ ತುಳಸಿ | ಗಂಧ ನೀಲೋತ್ಪಲಗಾತ್ರ |
ವೃಂದಗೋಧನ ರಕ್ಷಕ | ನಂದ ನಿನ್ನ ಪುತ್ರ ||
ಅಂದು ಮಲಯಜಾನಿಲವ | ಹೊಂದಿದ ಯಮುನಾತೀರದಲ್ಲಿ |
ಮುಂದಮುಂದ ಗತಿಯ ಮಾಳ್ಪ | ಸುಂದರ ನೇತ್ರಾ || ೨೬ |

ಮಲಯಜ ಮಾರುತನ ಗಂಧ | ಸುಳಿವಲ್ಲಿ ಪಾಠಕರು ಬಂದು |
ಲಲಿತಗಾತ್ರದ ಗಾಯಕರು | ಚೆಲುವ ನಿಂತಿದ್ದ- ||
ಬಳಿಯಲಿ ನಿಂತು ಭಕ್ತಿಯಿಂದ | ಬಲು ಸ್ತೋತ್ರವ ಮಾಡುತಿರಲು
ಬಲನ ತಮ್ಮ ಭಜಕರಘವ | ಕಳೆದ ಮುಕ್ತಿದಾಯಕ || ೨೭ |

ಭಜಕಾಗಾಧಪುರುಷಸಾರ | ವ್ರಜಕೆ ಬಾಹ ಸಮಯದಲ್ಲಿ |
ಸುಜನರಿಂದ ಸೇವಿತನಾದ | ನಿಜಸುಖಾಂಬುಧಿ ||
ಸ್ವಜನ ಗೋ-ವಿಪ್ರವತ್ಸಲಾಂ- | ಬುಜಸಖನ್ನ ಅಸ್ತಮಯದ್ಯ- |
ಗ್ರಜನ ಕೂಡಿ ಬಹನು ಗೋ- | ರಜದ ಲಗ್ನದಿ || ೨೮ ||

ಗೋಖುರೋದ್ಭವದ ಧೂಳಿ | ಶ್ರೀಕರಾಂಗದಲ್ಲಿ ತಾಳಿ |
ಶ್ರೀಕೃಷ್ಣ ಕೊಳಲನೂದುತ | ಆಕಳೊಡನೆ ||
ಗೋಕುಲವ ಹೊಂದಲಾಗೆ | ನಾಕಜನರು ಸುಹೃಜನವಾ- |
ನೇಕ ಸ್ತೋತ್ರ ಮಾಡುವರು | ಸಾಕೆನ್ನದಲೆ || ೨೯ ||

ಗೋವುಗೋವರ ತಾಪವಾ | ನಿವಾರಿಸುತಿಹ ಜವದಿ |
ದೇವಕೀ ಜಠರಾಬ್ಧಿ ಚಂದ್ರಾ | ದೇವಗಣೇಂದ್ರ ||
ಭ್ರೂವಿಲಾಸ ಪಾಂಗದಿಂದ | ಗೋವಳೇರಿಗಮಿತಾನಂದ- |
ವೀವುತಿದ್ದ ನಿರುತದಲ್ಲಿ | ಪಾವನಗುಣಸಾಂದ್ರಾ || ೩೦ ||

ಬದರ ಪಾಂಡುರ ಬಿಂಬ | ವದನ ಕುಂಡಲ ಕಪೋಲ |
ಪದುಮರಾಗ ವಜ್ರನೀಲ | ನವರತ್ನಾಭರಣ ||
ಯದುಪತಿಯಾಮಿನಿಯಲ್ಲಿ | ವಿಧುವಿನ ಬೆಳದಿಂಗಳಲ್ಲಿ |
ಸುದತೀಯರ ಕ್ರೀಡೆಯಲಿಪ್ಪ | ಮದಗಜಾಭನು || ೩೧ ||

ಗೋಮತಿ ಗೋಪಳರು ದಿವದಿ | ವ್ಯೋಮಕ್ರಾಂತನ ತಾಪ ಹೊಂದೆ |
ಸೋಮಕುಲಜ ಪರಿಹರಿಸಿದ | ಶ್ಯಾಮಸುಂದರ ||
ಕಾಮಿನೇರ ಸನ್ಮುಖದಿ | ಸ್ವಾಮಿ ತೋರುತಿಹ ಸತತ |
ಭಾಮೆಯರ ಭಕ್ತಿಭಾವ- | ಕೆ ಮನೋಹರ || ೩೨ ||

ವ್ರಜದ ಗೋಪೇರು ಕೃಷ್ಣನ್ನ | ತ್ರಿಜಗಾಶ್ಚರ್ಯದ ಲೀಲೆ |
ನಿಜ ಭಕ್ತಿಯಲಿ ಪಾಡಿ ಸುಖಿಸಿ | ಭಜಿಸುತ್ತಿದ್ದರು ||
ಸುಜನರು ತನ್ಮನಸ್ಕೆಯರು | ಗಜರಾಜಗಾಮಿನಿಯರು |
ದ್ವಿಜರಾಜವದನೆಯರು | ದ್ವಿಜದೇವಪ್ರಿಯರು || ೩೩ ||

ಈ ವೇಣುಗೀತಾಮೃತವ । ಡಾವ ಪ್ರಾಣಿಗಳ್ಹೇಳುವರು ।
ಭಾವಶುದ್ಧಿಲಿ ಕೇಳುವರು । ಕೋವಿದರವರು ॥
ಪಾವನ ಕೃಷ್ಣಚರಿತ್ರ । ಶ್ರೀವ್ಯಾಸಮುನೀಂದ್ರ ತನಯ ।
ಶ್ರೀವಿಷ್ಣುರಾತಂಗೆ ಹೇಳಿ । ಸೇವಿಸಿದಾನು ॥ ೩೪

ಶ್ರೀವರ ಪ್ರಸನ್ನವೆಂಕಟ । ದೇವದೇವನು ನಮಗಿಷ್ಟವ- ।
ನೀವನು ಸಂದೇಹವಿಲ್ಲ । ದೇವಸುರತರು ॥
ಆವ ಕಾಲ ಕಾಲದಲ್ಲಿ ಸ- । ತ್ಸೇವಕವತ್ಸಲ ಸತ್ಯ ।
ಭಾವುಕರು ಹರಿವ್ಯಾಸಂಗದ । ಜೀವನ್ಮುಕ್ತರು ॥ ೩೫ ॥

## ದನುಜಾ ಮಥನ ಹರಿಸೇವೆ ಇದೆಂದು

( ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆಯಲ್ಲಿಯ ಕೆಲವು ಹಾಡುಗಳು )

ರಾಗ–ಮಧ್ಯಮಾವತಿ (ಸಾರಂಗ) ತಾಳ–ಅದಿ (ಕಹರವಾ)

ದನುಜಾ ಮಥನ ಹರಿಸೇವೆ ಇದೆಂದು ।
ಅನಿಮಿಷ ಮುನಿ ಧರಿಗಿಳಿದು ತಾ ಬಂದೂ ॥
ವನಿತೆ ಕೊರವಂಜಿ ವೇಷವ ಧರಿಸಿ ।
ಜನಪ ಭೀಷ್ಮಕನೋಪವನದಲಿ ನಿಲಿಸಿ ॥ ಪ ॥

ಹಲವು ಕೊರವಿಯರ ಕೂಡಿ ಶ್ರಿಂಗರದಿ ।
ಬೆಲೆಯಿಲ್ಲದುಡಿಗೆ ತೊಡಿಗೆ ಇಟ್ಟು ಮುದದಿ ॥
ಇಳೆಯ ಜನರು ಮೋಹಿಸುವ ಪರಿ ಇಹಳು ।
ಕೆಳದೇರ ಗಡಣಾದಿ ಚೆಲುವೆ ಒಪ್ಪಿದಳು ॥ ೧ ॥

ಮುಂಜುಗಾವಿಯ ಸೀರೆ ನಿರಿತೆಗೆದುಟ್ಟು |
ಕೆಂಜಾಡೆ ಬಿಟ್ಟೋರೆ ದುರಬೀನ ಕಟ್ಟು ||
ಪಂಜಿನೋಲೆಯು ಮೂಗುತಿ ಬಾಲೆ ಇಟ್ಟು ಗುಲ- |
ಗಂಜಿ ಹೊಂದಾಳೆ ಸರಗಳ ಅಳವಟ್ಟೊ || ೨ ||

ಚಂಚಲ ನೇತ್ರಕಂಜನ ಬಾವುಲಿಟ್ಟು |
ಮಿಂಚುವ ಆಭರಣಗಳನು ತೊಟ್ಟು ||
ಪಂಚಶರಪಿತ ಪ್ರಸನ್ವೇಂಕಟ ಕೃಷ್ಣನ್ನ |
ಚಿಂತೀಸಿ ಜಯ ಜಯವೆಂದಳು ಕೊರವಿ || ೩ ||

## ಅಡಿಗಡಿಗೆ ಝುಣಝುಣರೆಂದು

ರಾಗ–ಶಂಕರಾಭರಣ (ಭೂಪ) ತಾಳ–ಅಟ (ದೀಪಚಂದಿ)

ಅಡಿಗಡಿಗೆ ಝುಣಝುಣರೆಂದು |
ನಡೆತಂದು ನಡೆತಂದೂ | ನಡೆತಂದು |
ಮುದದಿ ರಾಜಬೀದಿಲಿ ನಿಂದು || ಪ ||

ಮೃಡಗಾಹಿತನ ಪಟ್ಟದಾನೆ |
ಮುಂದಗಮನೆ ಮುಂದಗಮನೆ ||
ಮಂದಗಾಮಿನಿ ಕಡು ಮಾನಿ ಜನರ ಮೋಹಿನಿ || ೧ ||

ಚಪಲಾ ನೋಟಕೆ ನಾಗರಿಕರು |
ನೋಟಕಾರು ನೋಟಕಾರು ||
ಪಾಠಾಕರು ಲಿಪಿಯ ಚಿತ್ರದೋಲು ನಿಂತರೂ || ೨ ||

ನಿಪುಣೆ ಕೊರವಿ ಶ್ರೀ ಪ್ರಸನ್ನವೆಂಕಟನ |
ವೆಂಕಟನ ||
ಶ್ರೀಕೃಷ್ಣನ್ನ ಶ್ರೀಪಾದ ಜೇಡತಿದ್ದಳಣ್ಣಾ || ೩ ||

## ಬ್ರಾಹ್ಮಣರಾ ಕೇರಿಗೆ ಬಂದಳಾ ಕೊರವಿ

ರಾಗ–ರೇಗುಪ್ತಿ (ಸಾರಂಗ) ತಾಳ–ಝಂಪೆ (ದೀಪಚಂದಿ)

ಬ್ರಾಹ್ಮಣರಾ ಕೇರಿಗೆ ಬಂದಳಾ ಕೊರವಿ ಪರ- |
ಬ್ರಹ್ಮನ ಗುರುತ ಕೇಳುತ್ತ ||
ನಮ್ಮಮ್ಮ ನಮ್ಮಜ್ಜಿ ನಮ್ಮವ್ವೆ ನೀಡೆಂದು |
ಸನ್ಮಾನದಾಲಯವ ಪೊಗುತಾ || ೧ ||

ಇಂತಿಪ್ಪ ಸೊಬಗುಳ್ಳ ಕೊರವೆಯನು ಕಂಡ ನೃಪ- |
ನಂತಃಪುರದ ಸತಿಯರೈದೀ ||
ಕಂತುವಿನ ಜನನಿಗೆ ಕರವೆರಡು ಮುಗಿದು ಏ- |
ಕಾಂತ ಪೇಳಿದರು ಚೆನ್ನಾಗಿ || ೨ ||

ಓರ್ವ ಕಾಲಜ್ಞಾನ ಪೇಳ್ವ ಕೊರಚ್ಯಮ್ಮ ನ- |
ಮ್ಮೊರೊಳಗೆ ತಿರುಗುತಿಹಳಮ್ಮಾ ||
ಸರ್ವೇಶ ಪ್ರಸನ್ವೆಂಕಟ ಕೃಷ್ಣನಾಗಮದ |
ನಿರ್ವಚನ ಕರಿಸಿ ಕೇಳಮ್ಮಾ || ೩ ||

## ಎಲ್ಲಿಹಳೆಲ್ಲಿಹಳು ರಾಯನ ಮಗಳೆಲ್ಲಿಹಳು

ರಾಗ–ಕೇದಾರಗೌಳ (ಸಾರಂಗ) ತಾಳ–ಅಟ (ಕಹರವಾ)

ಎಲ್ಲಿಹಳೆಲ್ಲಿಹಳು ರಾಯನ ಮಗ- |
ಳೆಲ್ಲಿಹಳು ರಾಯನ ಮಗ- |
ಳೆಲ್ಲಿಹಳು ನೀಡೆ ಯವ್ವ || ಪ||

ಬಲ್ಲೆನಾ ಬಲ್ಲೆ ನಿನ್ನಯ ಮನದೆಣಿಕೆಯ ।
ಸೊಲ್ಲು ಕೇಳಿ ನೀಡೆ ಯವ್ವ ॥
ನಿಲ್ಲದು ನಿಲ್ಲದಕ್ಕಿಯ ಚಿನ್ನಹಸಿದ ಕೈ ।
ಒಳ್ಳೇ ಕಜ್ಜಾಯಂ ನೀಡೆ ಯವ್ವಾ ॥ ೧ ॥

ಕೆಟ್ಟ್ಯೋಗರಕೆ ಮನವಿಟ್ಟ ಕೊರವಿಯಲ್ಲ ।
ಮೃಷ್ಟಾನ್ನವ ನೀಡೆ ಯವ್ವಾ ॥
ಅಟ್ಟಿಟ್ಟ ಪಂಚ ಬಗೆ ಭಕ್ಷ ಎನಗಿಂದು ।
ಇಷ್ಟಕಾಣೆ ನೀಡೆ ಯವ್ವಾ ॥ ೨ ॥

ಮನ್ನಾಣೆ ಇಲ್ಲದೆ ಮನೆಯ ಹೊಗುವಳಲ್ಲ ।
ಕನ್ನೆ ಬಾರೆ ಮುಂದಕವ್ವಾ ॥
ಮುನ್ನೆ ರಕ್ಕಸನೊಯ್ದು ಮಡದೀಗೆ ಒಳಿ- ।
ತವನೆಲ್ಲ ಹೇಳಿದ್ದೆ ನಾನವ್ವಾ ॥ ೩ ॥

ನಿನ್ನ ಪ್ರಾಣದ ಪ್ರಿಯನೊಬ್ಬಾನೆ ಪರದೈವ ।
ಕನ್ಯೆ ಕೇಳಜ ಪ್ರಾಣರವ್ವಾ ॥
ಕಣ್ಣಾರ ಕಾಂಬೆ ನಿಮ್ಮಣ್ಣನ ಪಾಟ ಪ್ರ- ।
ಸನ್ವೆಂಕಟ ಕೃಷ್ಣನಿಂದವ್ವಾ ॥ ೪ ॥

### ಕಾಸಿನಾಸೆಯವಳು ನಾನಲ್ಲ

ರಾಗ-ಸೌರಾಷ್ಟ್ರ (ಸಾರಂಗ) ತಾಳ-ಚೂರ್ಣಿಕೆ (ದೀಪಚಂದಿ)

ಕಾಸಿನಾಶೆಯವಳು ನಾನಲ್ಲ ।
ಭಾಷೆ ಹುಸಿದರೆ ಬಿಡದು ಬಿಡುವೆನಲ್ಲಾ ॥

ಭಾಷೆಪಾಲಕರು ನಮ್ಮ ಸಿದ್ಧರೆಲ್ಲಾ ।
ಲೇಸುಲೇಸೆಂದು ಕೇಸಕ್ಕಿ ತಿಮ್ಮಯ್ಯನ ಚಿತ್ತವ
ಮುಚ್ಚ್ಯಾಲೆ ದುಂಡೆ ॥

ಎನ್ನ ಮನೆ ದೈವ ಎನ್ನಕ್ಕ ಕೇಳೆ ಯವ್ವ ।
ತಿರುಮಲೆ ತಿರುವೆಂಗಳಯ್ಯಾ ।
ವರಹೋಬಲ ನರಸಿಂಗಯ್ಯಾ ।
ಹರಿಕಂಚೀವರದ ರಾಜಯ್ಯಾ ।
ಸಿರಿರಂಗದ ರಂಗರಾಯಯ್ಯಾ ।
ಬದರಿಯ ನರನಾರಾಯಣಯ್ಯಾ ।
ಪುಂಡಲೀಕವರದ ಪಂಢರಿಯ ಅಮ್ಮ ।
ಉಡುಪ ಕುಲಜ ಮನ್ನಾರಿ ಕೃಷ್ಣ ।
ವಡ್ಡಿ ಜಗನ್ನಾಥ ಅಲ್ಲಾಳನಾಥ ।
ಕೊಲ್ಲಾಪುರದ ನಾಥೆ ।
ಯದುಗಿರಿನಾಥ ಸಿರಿಮುಷ್ಟಿನಾಥ ।
ಕೃತಪುರದ ವೀರನಾರಾಯಣ ।
ಕೊಲ್ಲಾಪುರದ ಕನ್ಯೆ ।
ಮೇಲಾಪುರದ ಚೆನ್ನ ।
ಅನಂತಶಯನ ಜನಾರ್ದನ್ನ ।
ಅನವರತ ಪರಸನ್ನ ವೆಂಕಟ ಕೃಷ್ಣನರನ್ನೆ ।
ಇಂತಿಪ್ಪಾನೇಕ ದೈವಗಳು ಏಕವೆಂದು ಏಕಾನೇಕವೆಂದು
ಎಂಬಿಹೆನೆ ಕೇಳೆ ಯೆವ್ವಾ ॥ ೧ ॥

ಈ ನಾಡಚರಿಸಿ ನಿನ್ನರಸುತ ಬಂದೆನೆ

ರಾಗ–ರುದ್ರಾಭರಣ (ದೇಸ್) ತಾಳ–ಅಟ್ಟ (ದೀಪಚಂದಿ)

ಈ ನಾಡ ಚರಿಸಿ ನಿನ್ನರಸುತ ಬಂದೆನೆ ।
ಜಾಣೆ ಬಂಗಾರೆವ್ವ ಕೈತೋರೆ ನಿನ್ನ ॥
ಕಾಣುತ ಹಸಿವೆ ನೀರಡಿಕೆಲ್ಲ ಹೋಯಿತು ।
ಜಾಣೆ ಬಂಗಾರೆವ್ವ ಕೈತೋರೆ ॥ ಪ ॥

ಸಂಧಾನಕ್ಹಾರುವನ ಅಟ್ಟಿದ್ದಿ ಮೊದಲೇನೆ ।
ಮಂಗಳದೇವಿ ಕೈತೋರೆ ॥ ೧ ॥

ನೀ ಬರದೊಕ್ಕಣಿಕೆ ಯದುರಾಯನಂತಾನು ।
ಸೌಭಾಗ್ಯವಂತೆ ಕೈತೋರೆ ॥ ೨ ॥

ರಥವನೇರಿಕೊಂಡು ಬರಹ ನೋಡಿಕೊಂಡ ॥
ಜಾಣೆ ಬಂಗಾರೆವ್ವ ಕೈತೋರೆ ॥ ೩ ॥

ಧ್ಯಾನದಾ ಕಳವಳ ಮುಸುಳ ಗಂಟಿನ ಚಿಂತೆ ।
ಮಾಣು ಮಂಗಳದೇವಿ ಕೈತೋರೆ ॥ ೪ ॥

ತ್ರಿಭವನೇಶ ಪ್ರಸನ್ನವೆಂಕಟ ಕೃಷ್ಣ ।
ತಾಬಹ ನೆಲೆದುಂಡೆ ಕೈತೋರೆ ॥ ೫ ॥

## ಸುರಮುಷಿ ಪೇಳ್ದ ವಕ್ಕಣಿಯಾ

ರಾಗ-ಧವಳಾರ (ದರಬಾರೀ ಕಾನಡಾ) ತಾಳ-ಆದಿ (ತೀನ್ ತಾಲ)

ಸುರಮುಷಿ ಪೇಳ್ದ ವಕ್ಕಣಿಯಾ ।
ಹರುಷಾದಿ ಕೇಳ್ದ ರುಕ್ಮಿಣಿಯಾ ॥
ಅರಸು ಪ್ರಸನ್ನವೆಂಕಟ ಕೃಷ್ಣ ।
ನಿರುತದಿ ಜಯವ ನಮಗೀವ ॥ ೧ ॥

ಜಯ ಜಯ ಚಿನ್ಮಯ ಮೂರ್ತಿ ।
ಜಯ ಜಗನ್ಮಯ ಸ್ವಚ್ಛಕೀರ್ತಿ ॥
ಜಯ ಜಯ ಪ್ರಸನ್ನವೆಂಕಟ ಕೃಷ್ಣ ।
ಜಯ ಮೂರ್ತಿ ನಿನಗೆ ಶರಣು ಶರಣಾರ್ತಿ ॥ ೨ ॥

## * ನಿತ್ಯೋತ್ಸವ ಪುಣ್ಯಸಂಕುಲ

### [ ಗೋವರ್ಧನೋದ್ಧಾರ ]

* ಗೋಕುಲದ ಜನರು ಪ್ರತಿವರ್ಷ ಪರ್ಜನ್ಯೋತ್ಸವವನ್ನಾಚರಿಸುತ್ತಿದ್ದ ಒಮ್ಮೆ ಈ ಉತ್ಸವದ ಸಿದ್ಧತೆಯಲ್ಲಿದ್ದಾಗ ಶ್ರೀಕೃಷ್ಣನು ತನ್ನ ಪ್ರತಿಷ್ಠೆಯನ ಸತ್ಯವಾಗಿಸಲೋಸುಗ ಗೋಕುಲದ ಜನರಿಗೆ, ಇಂದ್ರನ ಬದಲಾಗಿ ಗೋವರ್ಧ ಗಿರಿಯನ್ನು ಪೂಜಿಸಲು ಹೇಳಿದನು. ಇದರಿಂದ ಕ್ರೋಧಗೊಂಡ ಇಂದ ಪ್ರಳಯಮೇಘಗಳಿಗೆ ಆಜ್ಞೆಯಿತ್ತನು. ಆಗ ಶ್ರೀಕೃಷ್ಣ ಕಿರಿಬೆರಳಿನಿ ಗೋವರ್ಧನ ಗಿರಿಯನ್ನೆತ್ತಿ ಹಿಡಿದು ಗೋಕುಲದ ಜನರನ್ನು ರಕ್ಷಿಸಿದನು. ಇಂದ್ರ ಆಟ ನಡೆಯಲಿಲ್ಲ. ಗರ್ವಕ್ಕಾಗಿ ಇಂದ್ರ ಪಶ್ಚಾತ್ತಾಪಪಟ್ಟು ಶರಣುಬಂದನು.

ರಾಗ–ಘಂಟಾರವ (ಭೂಪ) ಅಟತಾಳ (ದೀಪಚಂದಿ

ನಿತ್ಯೋತ್ಸವ ಪುಣ್ಯ ಸಂಕುಲ ನಂದಗೋಕುಲ |
ನಂದಪುತ್ರನ ಲೀಲಾ
ಸ್ತೋತ್ರವ ಮಾಳ್ಪರ್ಗೆ ಕಡೆಯಿಲ್ಲ ಶೇಷಗಳವಲ್ಲ |
ದುಷ್ಟದೈತ್ಯಹೃತ್ಶೂಲಾ
ಭೃತ್ಯದೇವಾನ್ವಯ ಪ್ರತಿಪಾಲಾ ವೇಣುಗೋಪಾಲ |
ವಿಕ್ರಮತ್ರಯಶೀಲಾ
ಮುಕ್ತಾ ಮುಕ್ತಾಮರಜನ ಧ್ಯೇಯಾ | ಮುನಿಕುಲಗೇಯಾ || ೧

ಗೋಷ್ಠದ ಜನರೆಲ್ಲ ಒಂದಿನಾ ದೇವೇಂದ್ರನ | ಅಬ್ದತುಷ್ಟಿಗುತ್ಸವದಿ
ಮೃಷ್ಟಾನ್ನ ಪಾಕ ಸಿದ್ಧವ ಮಾಡೆ ಇತ್ತತ್ತೋಡ್ಯಾಡೆ |
ಶ್ರೀ ಕೃಷ್ಣ ನಿಂದಿಸಿದ
ಇಷ್ಟಾರ್ಥವೀವ ಗೋವರ್ಧನಗಿರಿ ವೃದ್ಧನ |
ಈತಗಿಷ್ಟು ಪೂಜೆಯನು
ಶಿಷ್ಟರು ಮಾಡೆಂದಾಜ್ಞಾಪಿಸಿದಾ ಬುದ್ಧಿಗಲಿಸಿದ |
ಗಿರಿಗಿಟ್ಟು ಉಣಿಸಿದ || ೨ |

ಬಹುಗುಣೋಪೇತಾನ್ನವ್ರಂಡನು ಗೂಢಲಿಂಗನು |
ಆ ಮಹೇದ್ರಪೊಕ್ಕನು
ಮಹಾ ವಿಶ್ವತತ್ತ್ವವ ತೋರ್ದನಾ ಜನಾರ್ದನಾ |
ಕಂಡ ಸಹಸ್ರಾಕ್ಷ ಇದನು
ಬಹುಕೋಪ ತಾಳ್ದನು ಘನವೊತ್ತ ಕಾಜ್ಞೆಯಿತ್ತ
ಸಪ್ತಾಹ ಮಳೆಗರೆದ
ಶ್ರೀಹರಿಯೆ ಕೃಷ್ಣನೆಂಬುದು ಮರೆತ ಐಶ್ವರ್ಯೋನ್ಮತ್ತ |
ಪ್ರಳಯದ ಹನಿಯಿಂದ ‖ ೩ ‖
ಆಕ್ರಂದಿಸಿದ ಪ್ರಾಣಿಗಳನೆಲ್ಲ ನೋಡಿ ಸಿರಿನಲ್ಲ |
ಪರಾಕ್ರಮಶೀಲಾ
ನಕ್ಕು ಸತ್ಕರಪಲ್ಲವದಿಂದ ಗಿರಿಯೆತ್ತಿದಾ |
ಚಿಕ್ಕಮಕ್ಕಳುಚ್ಚೇಲಿಂದ್ರ
ನಕ್ಕತ್ತಾಡುವಂತೇಳ್ದಿನಾ ಮತ್ತಸೂದನ |
ತನ್ನ ಒಕ್ಕಲುಳುಹಿದ
ಆಕ್ಕರದಿ ದೀನವತ್ಸಲಾ ಜಿತಖಳಜಾಲ |
ಇಂದ್ರನುಕ್ಕನು ಮುರಿದ ‖ ೪ ‖
ಆರೊಂದುದಿನ ಇಂದ್ರ ಭೋರ್ಮಳೆಗರೆದ ಹರಿಯೆಲ್ಲರ ಹೊರೆದ |
ನಿತ್ಯ ಭೂರ್ಯನ್ನಪಾನಾ
ಚಾರುಃಶಯ್ಯಾಸನಪಿತ್ತನು ವಿಶ್ವಕರ್ತನು | ಶ್ರೀ ನಾರಾಯಣನು
ಸಾರಿದ ಸಜ್ಜನರನು ಕಾವ ಜೊಪ್ಮಾದ್ಯರದೇವ |
ಸಾಸಿರನಯನನನು
ಶ್ರೀರಮಣನ ಮಹಿಮೆ ನೋಡಿದ | ವ್ಯೆಯೀಡಾಡಿ |
ಇಳೆಯಸಾರಿ ಸ್ತುತಿಸಿದಾ ‖ ೫ ‖
ಪ್ರಿಯೋಕ್ತಿಗಳ ರಚನೆಯಿಂದ ಉಪನಿಷದಿಂದ |
ಸಾಧುಪ್ರಿಯ ಗೋವಿಂದ
ನಾಯೇನನರಿಯೆ ನಿನ್ನವನೆಂದ ತನ್ನ ಸಲಹೆಂದ |
ವಿಧಿ ವಾಯುಭವಾದ್ಯಮರ

ನಾಯಕಜನಕೆಲ್ಲ ಗುರು ನೀನು ಬಾಲಕ ನಾನು |
ಜಗನ್ನಿಯಾಮಕನು
ನೀ ಆಕಳಕಾವ ಬಗೆ ಹೇಳೊ ಮಹಾದಯಾಳೊ
ಎನ್ನಯ ತಪ್ಪು ತಾಳೊ ॥ ೬ ॥

ವೇದಕ್ಕೆ ನಿಲುಕದ ಗುಣವಾರಿಧಿ ವಿಶ್ವಕ್ಕೇಕಾದಿ |
ವೇದೋದರ ಜನಕ
ಆಧಾರ ಪೋಷಕ ಶಿಕ್ಷಕ ಮೋಕ್ಷದಾಯಕ | ನಿನ್ನ ಸದೃಶರಾರಿಲ್ಲ
ಅಧಿಕರ್ಕಾಲತ್ರಯದಲಿಲ್ಲ ಲಕುಮಿಯುನಲ್ಲ | ನಿನ್ನ ಹೊರತಾರಿಲ್ಲ
ಈ ದತ್ತ ಸಿರಿಯಿಂದ ಉಕ್ಕಿದೆ ಮದಸೊಕ್ಕಿದೆ |
ಬಂದು ಪಾದಕೆರಗಿದೆ ॥ ೭ ॥

ಕ್ಷಮಿಸೆನ್ನವಗುಣ ದಯಮಾಡೈ ಕೃಪೆಯಲಿ ನೋಡೈ |
ಪಾದಕಮಲವಾಶ್ರಯಿಸಿದೆ
ಕುಮತಿ ನಿನ್ನವರನು ಕೆಡಿಸಿದೆ ಕೇಡನೆಣಿಸಿದೆ- |
ನೆಂದು ಅಮರೇಂದ್ರ ತುತಿಸಿ
ನಮಿಸಿ ನಮಿಸಿ ತಾ ನುಡಿಯಲು ಕೃಷ್ಣ ದಯಾಳು |
ತಾ ಕ್ಷಮಿಸಿ ನುಡಿದನು
ಅಮರೇಶ ನಿನ್ನರ್ಚನೆ ಕೆಡಿಸಿದೆ ಮದವಿಳಿಸಿದೆ |
ಇನ್ನು ಭ್ರಮೆಬೇಡೆಚ್ಚರವು ॥ ೮ ॥

ಸುರಭಿಪಯೋದರ ತೊರೆದಳು ಮಳೆಗರೆದಳು |
ಶ್ರೀ ಹರಿಗಭಿಷೇಕ
ಪರಮಭಕುತಿಯಿಂದೆರೆದಳು ಸ್ತುತಿಮಾಡ್ದಳು |
ನಮಿಸಿ ಸುರಪತಿಯೊಡನೆ
ಸುರಲೋಕಕ್ಕೈದಿದಳ್ ಮಾನಿಯು ಹವಿರ್ದಾನಿಯು |
ಈ ಹರುಷವಾರಿಧಿಯು
ವರಗೋಕುಲಸ್ಥರ ಸುಖಿಸಿತು ನಿತ್ಯ ನಲಿಸಿತು
ಶ್ರೀ ಪ್ರಸನ್ವೆಂಕಟ ದಯದಿ ॥ ೯ ॥

## ನಾರಾಯಣಾಯ ನಮೋ ನಾರಾಯಣಾಯ ನಮೊ

### [ ನಾರಾಯಣ ಪಂಜರ ]

ರಾಗ–ಸಾರಂಗ (ಭೂಪ) ತಾಳ–ಝಂಪೆ (ದೀಪಚಂದಿ)

ನಾರಾಯಣಾಯ ನಮೋ ನಾರಾಯಣಾಯ ನಮೋ ।
ನಾರಾಯಣಾಯ ನಮೋ ನಾರಾಯಣಾ ॥
ನಾರದರ ಮುಖದಿಂದ ನರಕಸ್ಥರೆಬ್ಬಿಸಿದೆ ।
ನಾರಾಯಣಾಯ ನಮೊ ನಾರಾಯಣಾ ॥ ಪ ॥

ಮತ್ತಕರಿಯವಸಾನಕೆ ಹರಿಯೆ ನೀ ಬಂದು ಕಾಯ್ದೆ ।
ನಾರಾಯಣಾಯ ನಮೋ ನಾರಾಯಣ ॥
ಭಕ್ತಪ್ರಹ್ಲಾದನೇಕಾಂತ ನಿಷ್ಠೆಗೆ ಒಲಿದೆ ।
ನಾರಾಯಣಾಯ ನಮೋ ನಾರಾಯಣಾ ॥ ೧ ॥

ಪೃಥುವಿಗಳ್ಳನನಿರಿದು ಸತಿಯನುದ್ಧರಿಸಿದೆ ।
ನಾರಾಯಣಾಯ ನಮೋ ನಾರಾಯಣ ॥
ಪೃಥುಚಕ್ರವರ್ತಿಗೆ ಪ್ರತ್ಯಕ್ಷನಾಗೊಲಿದೆ ।
ನಾರಾಯಣಾಯ ನಮೋ ನಾರಾಯಣಾ ॥ ೨ ॥

ಶೂಲಿಯನು ಬೆಂಬತ್ತಿ ಸುಡುವೆನೆಂಬನ ಸುಟ್ಟೆ ।
ನಾರಾಯಣಾಯ ನಮೋ ನಾರಾಯಣಾ ॥
ಶೀಲವಿಡಿದಂಬರೀಷನ ಮತವ ಗೆಲಿಸಿದೆಯೊ ।
ನಾರಾಯಣಾಯ ನಮೋ ನಾರಾಯಣಾ ॥ ೩ ॥

ಸುರಹೂತಿಗಖಿಳ ಪರಮಾರ್ಥವನು ಅರುಹಿದೆ ।
ನಾರಾಯಣಾಯ ನಮೋ ನಾರಾಯಣಾ ॥
ಸುರಪನ್ನ ಭಯಪಟ್ಟ ಧ್ರುವಗೆ ಧ್ರುವಪದವಿತ್ತಿ ।
ನಾರಾಯಣಾಯ ನಮೋ ನಾರಾಯಣಾ ॥ ೪ ॥

ಮಹಾಪಾಪನಿರತ ಅಜಾಮಿಳನಘವ ಹರಿಸಿದೆ ।
ನಾರಾಯಣಾಯ ನಮೋ ನಾರಾಯಣಾ ॥
ಮಹಿದಾಸನಾಗಿ ತಾಯಿಗೆ ತತ್ವವನು ಪೇಳ್ದೆ ।
ನಾರಾಯಣಾಯ ನಮೋ ನಾರಾಯಣಾ ॥ ೫ ॥

ಮುನಿಕಾಲಿಲೊದೆಯೆ ಕರುಣಿಸಿದೆ ಕರುಣಾನಿಧಿ ।
ನಾರಾಯಣಾಯ ನಮೋ ನಾರಾಯಣಾ ॥
ಮುನಿವೆಂಗಳರೆಯಾಗೆ ಪದಸೋಂಕಿಸೆತ್ತಿದೆಯೋ ।
ನಾರಾಯಣಾಯ ನಮೋ ನಾರಾಯಣಾ ॥ ೬ ॥

ಶುಭ ಕಪೀಶಗೆ ಅಭಯ ವರವಿತ್ತು ಕೈಪಿಡಿದೆ ।
ನಾರಾಯಣಾಯ ನಮೋ ನಾರಾಯಣಾ ॥
ಶುಭಕಂಠನಸಂಜಿಕೆಯ ಹಸುಮ ಪೇಳಲು ಕಳೆದೆ ।
ನಾರಾಯಣಾಯ ನಮೋ ನಾರಾಯಣಾ ॥ ೭ ॥

ಶರಣು ಹೊಕ್ಕಿಹ ವಿಭೀಷಣಗರಸುತನ ಕೊಟ್ಟೆ ।
ನಾರಾಯಣಾಯ ನಮೋ ನಾರಾಯಣಾ ॥
ಶರಧಿರಾವಣನಿರಿದು ಸುರರ ಸಂಕಟ ಹರಿದೆ ।
ನಾರಾಯಣಾಯ ನಮೋ ನಾರಾಯಣಾ ॥ ೮ ॥

ಗೋಪಸ್ತ್ರೀಯರ ಕುಚದಿ ನ್ಯಸ್ತ ಚರಣಾಬ್ಜಯುಗ ।
ನಾರಾಯಣಾಯ ನಮೋ ನಾರಾಯಣಾ ।
ಗೋಪೀಜನಜಾರ ನವನೀತದಧಿಚೋರ ।
ನಾರಾಯಣಾಯ ನಮೋ ನಾರಾಯಣಾ ॥ ೯ ॥

ಪಾಂಡವರ ಪ್ರಾಣ ದ್ರೌಪದಿ ಮಾನರಕ್ಷಕನೆ ।
ನಾರಾಯಣಾಯ ನಮೋ ನಾರಾಯಣಾ ॥
ಪೌಂಡ್ರಕ ಶೃಗಾಲ ಕೌರವ ಭೂಮಿಭಾರಹರ ।
ನಾರಾಯಣಾಯ ನಮೋ ನಾರಾಯಣಾ ॥ ೧೦ ॥

ಅಭಿಮನ್ಯುನಾತ್ಮಜನ ಬಸಿರೊಳಗೆ ಸಲಹಿದೆಯೋ |
ನಾರಾಯಣಾಯ ನಮೋ ನಾರಾಯಣಾ ||
ಅಭಯದಲಿ ಪಾಂಡವರ ಸಂತತಿಯ ಬೆಳಸಿದೆಯೋ |
ನಾರಾಯಣಾಯ ನಮೋ ನಾರಾಯಣಾ || ೧೧ ||

ಏನರಿಯದವ ನಾನು ನೀನೇ ಪರಗತಿ ಎನಗೆ |
ನಾರಾಯಣಾಯ ನಮೋ ನಾರಾಯಣ ||
ಪ್ರಾಣ ನಿನಗರ್ಪಿಸಿದೆ ಪ್ರಸನ್ನವೆಂಕಟ ಕೃಷ್ಣ |
ನಾರಾಯಣಾಯ ನಮೋ ನಾರಾಯಣು || ೧೨ ||

## ರಂಗ ಕೊಳಲನೂದಲಾಗಿ

[ ರಂಗನ ಕೊಳಲ ವರ್ಣನೆ ]

ರಾಗ- ನೀಲಾಂಬರಿ (ಭೂಪ) ತಾಳ- ಅಟ (ದೀಪಚಂದಿ)

ರಂಗ ಕೊಳಲನೂದಲಾಗಿ |
ರಂಗಯ್ಯ ಕೊಳಲನೂದಲು |
ಮಂಗಳಮಯವಾಯಿತು; ಧರೆಯ ಜ- |
ನಂಗಳು ಜೀವನ ಚೇತನ ಮರೆದು
ಶ್ರೀರಂಗ ಧ್ಯಾನಪರರಾದರೋ || ಪ ||

ಬಾಡಿದಾ ಬಳ್ಳಿ ಮರಾ ಗೊನೆವಡಿದು |
ತೀಡುವ ಮಂದಮಾರುತನ ಕೂಡಿ ತೂ- |
ಗ್ಯಾಡುವ ವನದ ಫಲದ ಗೊಂಚಲದಿ |
ಪಾಡಲೊಲ್ಲವು ಅಳಿಕುಲಗಳೂ ||
ಹೇಡಿಗೊಂಡಾವು ಜಾಣಕ್ಕಿ ಗಿಣಿಯೂ ಮಾ- |
ತಾಡದ್ಹೆ ಕಳೆಗುಂದಿದವು ಕೋಗಿಲೆ |
ಓಡ್ಯಾಟ ವೈರಾಟ ಜರಿದು ಖಗಾಮೃಗ |
ಗಾಢ ನಿದ್ರಾವಶವಾದವೊ || ೧ ||

ಕೆಳಗಿನುದಕ ಉಕ್ಕೇರಿ ಬಂದಾವು |
ಥುಳುಕಿ ಚಲ್ಯಾಡಿ ಸಂತಳು ಯಮುನೆ ವ್ಯಾಲೆ ಮಾ- |
ಡೊಡ್ಡಿ ಮೇಘಾಳಿ ಜೋರಿಟ್ಟವು |
ಕಲ್ಲು ಕರಗಿ ನೀರಾದವೊ ||
ನಳಿನ ಚಂಪಕ ನಾಗ ಪುನ್ನಾಗ ಪಾ- |
ಟಲ ಶಾವಂತಿಗಿ ಕುಂದ ಬಕುಳಾವು |
ಮಾಲತಿ ಜಾಜಿಯು ಪರಿಮಳಂಗೂಡಿ |
ನೀಲಾಂಗನಂಘ್ರಿಗೆ ಎರಗಿದವೊ || ೨ ||

ಕೆಚ್ಚಲಾ ಬಿಗಿದು ತೊರದ ಮೊಲೆಯ |
ವತ್ಸದೊಡಲಾಸೆ ಜರಿದೆಳೆ ಹುಲ್ಲು |
ಕಚ್ಚಿ ಅಲ್ಲಿಗಲ್ಲಿನಿಂದಾವು ತಲೆಯಮೇಲ್ |
ಪುಚ್ಛವ ನೆಗಹಿ ನೀಂಟಿಸಿ ||
ಅಚ್ಯುತನಾಕೃತಿ ನೋಡಲು ಸುರರಿ- |
ಗಚ್ಚರವಾಯಿತು ಆವು ಕಂಡಾನಂದ |
ಪೆಚ್ಚಿ ಮುಕುಂದನ ಲೀಲಾವಿನೋದಕ್ಕೆ |
ಮೆಚ್ಚಿ ಕುಸುಮವ ಸುರಿದರೊ || ೩ ||

ಮುದ್ದು ಮೋಹನನ್ನಾ ಮಂಜುಳ ಸಂಗೀತ |
ಸದ್ದಾನಾಲಿಸಿ, ಗೋಪಾಂಗನೆರೆಲ್ಲರೂ |
ಬುದ್ಧಿ ಸೂರ್ಯಾಡಿದರಂಗಜ ಶರಕೆ |
ಬಿದ್ದು ಪರವಶರಾದರೋ ||
ಸಿದ್ಧ ಮುನಿಜನರಿದ್ದ ಸಮಾಧಿಯೊಳಿ- |
ದ್ದೆದ್ದು ಕುಣಿದರೆದೆದಾವರೆಯ |
ಗದ್ದುಗಿಯ ರಸನೊಲಿಸಿಕೊಂಡರು |
ಗೆದ್ದರೊ ಭವಸಮುದ್ರದ || ೪ ||

ಶ್ರೀ ಮನೋಹರ ಮೂರ್ತಿ ಗೋಪಾಲನು |
ಆ ಮಧುಕುಂಜವನದಿ ತ್ರಿಭಂಗಿಲಿ |
ಹೇಮಾಂಬರುಟ್ಟು ಗೀರ್‌ಗಂಧಕಸ್ತೂರಿ ||
ನಾಮ ಮುಕುಟ ಕುಂಡಲಬೆಳಗೀಲಿ ||
ದಾಮ ವನಮಾಲೆ ರತುನಾಭರಣ ||
ಸ್ವಾಮಿ ಶ್ರೀ ಪ್ರಸನ್ವೆಂಕಟ ಕೃಷ್ಣನ |
ರಾಮಗುಂಡಕ್ರೀಯ ಮೇಘರಾಗವ ಮಾಡೆ |
ಸಾಮಗಾಯನದಿ ನಮೋ ಎಂದರು || ೫ ||

## ಜಯುವ್ರಜಕೆ ನೀ ಜನ್ಮಿಶಧಿಕವು

[ ಗೋಪೀಗೀತೆ ]

ಜಯುವ್ರಜಕ್ಕೆ ನೀ ಜನ್ಮಿಶಧಿಕವು
ಶ್ರಿಯುಳ ವಾಸವು ಶಾಶ್ವತಿಲ್ಲಿಯುು
ಪ್ರಿಯುಗೆ ಪ್ರಾಣವಾರ್ಪಿಸಿ ನೋಡುವಾ
ಪ್ರಿಯುರ ದೃಷ್ಟಿಗೆ ಪ್ರಾಪ್ತಿಯಾಗವೆ || ೧ ||

ಸ್ವಜನ ವಿಸ್ಮಯಾಸ್ಮಿತದಲಳಿದೆಯೋ
ವ್ರಜದ ದುಃಖವನೊದ್ದ ವೀರನೆ
ಭಜಿಸು ಕಿಂಕರೀರ್ಬಾಸಖಾ ಹರೆಂ–
ಬುಜಸಮಾಸ್ಯವಾ ಅಕ್ಷಿಗೆ ತೋರ್ವನೆ || ೨ ||

ಶರತ್‌ಕಾಲದ ಸ್ವಬ್ಜಗರ್ಭದಾ
ಸಿರಿಗೆ ಪ್ರೋಲುವಾಸ್ಯೇಕ್ಷಿಯೊಪ್ಪುವ
ಸುರತಸ್ವಾಮಿ ನೀ ಶುಲ್ಕದಾಸೆರಂ
ವರದ ಕಾಯದೆ ವಧಿಯುದಾವುಪ್ಯೆ || ೩ ||

ವಿಷದ ನೀರ್ದೊರೆ ವ್ಯಾಳರಾಕ್ಷಸರಿಂ
ವಿಷಮ ಗಾಳಿಮಳೆ ವೈದ್ಯುತಾಗ್ನಿಯಿಂ
ವೃಷಭ ಮುಖ್ಯರಿಂ ವಿಶ್ವದುಃಖದಿಂ
ವೃಷಭ ಸಮ್ಮನು ರಕ್ಷಿಸಿದೆಯೊ ನೀ || ೪ ||

ಅಖಿಲ ಜೀವಕಾಂತರ್ನಿಯಾಮಕ
ಗೋಕುಲ ರಕ್ಷಕಾರ್ಗೆಂತೆ ಬಾಲಕಾ
ವಿಖನಸಾರ್ಥಿತಾ ಸರ್ವಗೋಪಿಕಾ
ಸಖ ನೀ ಪುಟ್ಟಿದೆ ಸಾತ್ವವಂಶದಿ || ೫ ||

ವರವರಿಷ್ಮನೆ ವಾಷ್ಣಿಕಾಂತನೆ
ಶರಣು ಹೊಕ್ಕರಾ ಸಂಸೃತಿಹರಾ
ನೆರೆಕರಾಬ್ಜವಾನಿಟ್ಟು ಶೀರ್ಷವಾ
ದರಿಸು ಶ್ರೀಕರಾ ಧರಿಸಿದಾ ಕರಾ || ೬ ||

ಪ್ರಣತ ಪ್ರಾಣಿಗಳ ಪಾಪಕರ್ಷಕಾ
ವಿನಬಳಿಲಿಪ್ಪ ವೈಷ್ಣವಾರ್ಚಿತಾ
ಫಣಿಯ ಪೆಡೆಲಿಹ ಪಾದಪದ್ಮವಾ-
ಸ್ತನಕೆ ಹೊಂದಿಸೈ ತಾಪವಾರಿಸೈ || ೭ ||

ಬುಧರ ಮೆಚ್ಚಿನಾ ಬುದ್ಧಿಕಾರಣಾ
ಮಧುರ ಮಾತಿನಾಂಭೋಜನೇತ್ರನೆ
ತ್ವದೀಯ ಆಜ್ಞೆಯ ತಪ್ಪದಿಪ್ಪವ-
ಗ್ಯರ್ಥರಸೋಮವ ಊಡು ವೀರನೆ || ೮ ||

ನಿನ್ನ ಕಥಾಮೃತವು ನೀಚ ಜೀವನಂ
ಮುನಿಗಳರ್ಥವು ಮತ್ತೆ ಅಘಹರಂ
ಮನನ ಭವ್ಯವು ಮಹಾಭಾಗ್ಯವು
ನೆನೆವ ಭಕ್ತರು ಸತ್ಯದಾತರು || ೯ ||

ಪ್ರಿಯು ನಿಶ್ವಾಸವು ಪ್ರೇಮನೋಟವು
ದಯಿಯು ಕ್ರೀಡೆಯು ಧ್ಯಾನ ಶೋಭನವು
ನಯು ರಹಸ್ಯವು ನಮ್ಮ ಮನವು
ಬೆಯಿಸಿ ನೋಯಿಸುವ ಬುದ್ಧಿ ಕೈತವ ||೧೦||

ವ್ರಜವ ಬಿಟ್ಟು ಆವನ್ನು ಪೋಸುವಾಂ-
ಬುಜವ ಹೋಲುವಾ ಅಂಘ್ರಿಗೊತ್ತುವ
ರಜತೃಣಾಶ್ಮವಾಲೋಚಿಸಿ ಮನವು
ಭಜಿಸದ್ಯೆ ಸುಖ ಭೂಪತೆ ಸಖಾ ||೧೧||

ದನದ ಧೂಳಿಯಿಂದೊಪ್ಪುವಳಕದಿಂ
ವನಜವಕ್ತ್ರವ ವೀಕ್ಷಿಸಿ ಮನವು
ನೆನೆಸಿ ಇಚ್ಛಿಪೆವು ನಿನ್ನ ರೂಪವ
ಇನನ ಅಸ್ತದಿ ವೀರ ನಿತ್ಯದಿ ||೧೨||

ಭಕುತರಿಚ್ಛಿಪ ಅಬ್ಜೇಜನರ್ಚಿಪಾ
ಪೃಥಿವಿ ಭೂಷಿಪಾಪತ್ತುವಾರಿಪಾ
ಸುಖಕೆ ಶ್ರೇಷ್ಠವಾ ಸತ್ಪದಾಬ್ಜವಾ
ಸುಕುಚದಲ್ಲಿಡೈ ಸುವ್ಯಥೇ ಸುಡೈ ||೧೩||

ಸುರತ ಹುಟ್ಟುವಾ ಶೋಕವಟ್ಟುವಾ
ಸ್ವರಿಪ ವಂಶವ ಸಂಧಿಸೊಪ್ಪುವಾ
ನರರ ರಾಗವನಟ್ಟಿ ಮರೆಸುವಾ
ಅರಸ ನಿನ್ನಧರಾಂಕಿತಾ ಸುಧಾ ||೧೪||

ಹಗಲ ಚರಿಸುವಿ ಹೋಗಿಯಾಟವಿ
ಯುಗಕೆ ವೆಗ್ಗಳವು ಒಂದು ತೃಟಿಯುದು
ಮೊಗದ ಸಿರಿಗುರುಳ್ಮೆಚ್ಚಿ ನೋಡಲು
ಮುಗುಳೆ ಜಡದೊಳು ಪೋಷಿಪೆಳೆಗಳು ||೧೫||

ಎಳೆಯರಿನಿಯರ ಇಷ್ಟರಾಪ್ತರಾ
ಬಲವ ಮೀರುತ ಬಂದೆವಚ್ಯುತಾ
ಲಲಿತಗೀತದಾಲಾಪಮೋಹದಾ-
ಬಲೆರ ನೈಶಕೆ ಬಿಟ್ಟ ಕುಹಕಾ || ೧೬ ||

ಮುಗುಳನಗೆ ಮೊಗ ಮೋಹ ನೋಟವು
ಮುಗುಳಗಣೆಯನ ಮೀಟುವಾಘನಾ
ಮಿಗಿಲು ನಿಮ್ಮೆದೆ ಮಾಟ ಕಂಡೆದೆ
ಬಿಗಿದು ಅಪ್ಪುವೆಂಬೆಸೆವ ಮೋಹವು || ೧೭ ||

ಆಕಳ ಕಾವರಾ ಮಂಗಳಾಹರಾ
ಪ್ರಕಟ ನಿನ್ನದು ಪಾಪ ಪ್ರೋಪುದು
ಸ್ವಕಿಯರಾರ್ತ ಹಾ ಸರ್ವರೋಗ ಹಾ
ನಿಖಿಳರಾಶಿಯಾ ನೀ ಪೂರೈಸಯ್ಯಾ || ೧೮ ||

ಪ್ರಸನ್ನವೆಂಕಟಾ ಪಶುಪ್ರಪಾಲಕಾ
ಆಶೆಯುಗ್ರೀತವಾ ಅರಿತು ಮಾಧವಾ
ಪ್ರಸನ್ನವಾಗುವಾಪತ್ತು ಹರಿಸುವಾ
ಶಶಿಮುಖಿಯರೊಳು ಸ್ನೇಹತಪ್ತರಾ || ೧೯ ||

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚಿತ್ರಧಾ-
ರುರುದುಃ ಸುಸ್ವರನ್ ರಾಜನ್ ಕೃಷ್ಣದರ್ಶನ
ಲಾಲಸಾಃ || ೨೦ ||

ತಾಸಾಮಾವಿರಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ
ಪೀತಾಂಬರಧರಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ || ೨೧ ||

# ಭೃಂಗ ನಿನ್ನಟ್ಟಿದನೆ
## ( ಭ್ರಮರಗೀತೆ )

ರಾಗ–ಆನಂದಭೈರವಿ (ಕಾಫಿ) ತಾಳ–ತ್ರಿಪುಟ (ತೀನ್ ತಾಲ)

ಭೃಂಗ ನಿನ್ನಟ್ಟಿದನೆ ಸಿರಿ- |
ರಂಗ ಮಥುರೇಲಿ ನಿಂದು |
ಅಂಗಜಲುಬ್ಧಕ ಪೂಗೋ- |
ಲಂಗಳ ತಡಿಯಾನಿಕ್ಕಿ ||
ಹೆಂಗಾಳೆಂಬೊ ಹುಲ್ಲೆ ಮೃ- |
ಗಂಗಾಳ ಗುರಿಯುಮಾಡಿ |
ಹಿಂಗಿಸುತೈದಾನೆ ಅಸುವಾ | ಹೇ ಕಿತವ || ಪ ||

ನಿನ್ನ ನೋಡಿ ನಮ್ಮ ಅಚ್ಯು- |
ತನ್ನ ಕಂಡಂತಾಯಿತಯ್ಯಾ |
ಚನ್ನಿಗಾರರಸು ಕುಶ–
ಲೋನ್ನತಿಯೊಳಿಹನೇನೋ ||
ಚಿನ್ನತನ ಮೊದಲಿಂದ- |
ವನ ಕಿತವಾನ್ನಾವ್ ಬಲ್ಲೆವೊ |
ಘನ್ನ ಮಾಯಗಾರಾ ಚಿತ್ತಾ ಚೋ- |
ರನ್ನ ಹೇ ಕಿತವಾ ||
ಮನ್ನಣಿಗೆ ಮೆಚ್ಚಿ ತನು- |
ವನೊಪ್ಪಿಸಿದ ಮುಗುಧ- |
ವೆಣ್ಣುಗಳ ವಿರಹಾಬ್ಧಿ- |
ಯನ್ನು ದಾಟಿಸುವೆನೆಂದೂ ||
ತನ್ನ ನೇಹವೆಂಬೊ ನಾವಿ- |
ಯನ್ನೇರಿಸಿ ಮೋಸಾಗೈಸಿ |
ನಮ್ಮನ್ನು ನಡು ನೀರೊಳು ತೊರೆದಾನೊ ಹೇ ಕಿತವಾ|| ೧ ||

ಮಧುಕುಂಜವನದೊಳು ಮಧುವೈರಿ ಕೊಳಲೂದೆ |
ಮಧು ಸುಸ್ವರ ಕೇಳಿ ಮದಿರಾಕ್ಷಿಯರೆಲ್ಲಾ ||
ಸ್ವಧಾಮ ಧ್ಯಾನ ಬಿಟ್ಟು ಮೃಗ- | ಮದಗಂಪಾವಿಡಿದೈದಿ |
ಮದನನಯ್ಯನ ಕಾಣೆವೊ | ಹೇ ಕಿತವಾ ||

ಮದವೇರಿ ತಲೆಬಾಗಿ | ಮೇದಿನೀ ನಿಟ್ಟಿಸಲಾಗಾ |
ಮೃದು ವಾಕ್ಯದೊಳಪ್ಪಿ | ಅಧರಾಮೃತಾ ಭೋಜನಾ |
ಒದಗಿ ಸಂತತಾವಿತ್ತು ಸ- | ನ್ನಿಧಿ ನಮ್ಮನ್ನಗಲಿ ಕಲ್ಲೆದೆ |
ಮುದದಿಯಾದಾನೆಂತೊ ಕೃಪಾಳು | ಹೇ ಕಿತವಾ || ೨ ||

ಉತ್ಪಲ ಶಾಮಲ ಕೋದಂಡ್ಯಕ್ತ ಚಾವನ್ನವಾ ತೀಡಿ |
ಅತ್ಯಮಲ ಪೀತಾಂಬರ ಸುತ್ತಿದಾ ಸುನೂಪುರ ಝು- |
ಣತ್ಕಾರದಿಂ ಮಿಂಚಿಪೆವ್ಮಾ ಚಿತ್ತಾಶಿಖಿಗೆ ಪೀಯೂಷಾ- |
ಸಕ್ತಮೇಘನಂತೆ ಒಪ್ಪುವಾ | ಹೇ ಕಿತವಾ ||

ಮತ್ತೆವಕ್ಷದಾ ಶ್ರೀವತ್ಸಾ ಕೌಸ್ತುಭ ವೈಜಯಂತಿ ಶ್ರೀ- |
ಮತ್ತುಲಸಿ ಘಮಘಮಿಸುತ್ತಲಿಹಾರಗಳ ಮಧ್ಯ |
ರತ್ನಾನ ಕಂಕಣ ಭುಜ, ಕೀರ್ತಿಯಿಂದೊಪ್ಪುವ ಪುರು- |
ಷೋತ್ತಮನ್ನ ಬಣ್ಣಿಪಳುಂಟೇ | ಹೇ ಕಿತವಾ || ೩ ||

ಹೆಂಗಳೆರೊಂದಾಗಿ ಅಂತರಂಗದರಸನಾಡಿದಾ |
ಮಂಗಳ ಚರಿತ್ರೆಯಾ ಸಂಗೀತದಿ ಪೊಗಳುತಾ |
ಕಂಗಳಜಲ ಉಕ್ಕುತ ಇಂಗಿತಜ್ಞ ದೇವನಂಗಾ |
ಸಂಗದಾನಂದವಾ ನೆನೆದು | ಹೇ ಕಿತವಾ ||

ಮಂಗಳ ವೇದಸ್ತೇಯಾರಿ ಶೃಂಗಾರಾಕೂರುಮ ನಮೊ |
ಪೊಂಗಣ್ಣಾನಾ ಸೀಳ್ದ ನಾರಸಿಂಹ ವಟು- | ಭಾರ್ಗವ ನಮೋ |
ಅಂಗದಾಪಾರ್ಥ ಶಂಭೂ ತುರಂಗಪ ಪ್ರಸನ್ ವೇಂಕಟ |
ತುಂಗಮಹಿಮಾ ನಮೋ ಎಂಬೆವೋ | ಹೇ ಕಿತವಾ || ೪ ||

## ಹರಿಪ್ರವಣರು ಗೋಪಾಲಕರು

[ ವರುಣಪಾಶಬಂಧಮೋಚನ ]

ರಾಗ–ತೋಡಿ (ಭೈರವಿ) ಏಕತಾಳ (ಧುಮಾಳಿ)

ಹರಿಪ್ರವಣರು ಗೋಪಾಲಕರು ಶ್ರೀ- ।
ಹರಿಕಥಾಮೃತ ಪ್ರತಸ್ತುತಿರತರು ॥ ಪ ॥

ಕಾಂಬುದು ಕೇಳ್ವುದು ಕೊಂಬುದು ಕೊಡುವುದು
ಸಂಭಾಷಣ ಪ್ರಾಣ ನಡೆ ಶ್ವಾಸ
ಸಂಭ್ರಮಮನೋರಥಲ್ಯವಸ್ಥಾತ್ರಯು
ಅಂಬುಜನಾಭನಿಗರ್ಪಿಪರು ॥ ೧ ॥

ಕರಣತ್ರಯವು ಸುಕೃತ ದುಷ್ಕೃತ ಬಂಧಕವು
ಪರಮ ಪದವು ಸತ್ತ್ವತ್ರಯವು
ಹರಿಯಾಧೀನವು ಸಿರಿಸರಸಿಜಭವ
ಹರಸುರರ್ ಹರಿದಾಸರೆನುತಿಹರು ॥ ೨ ॥

ಗೋದೋಹನ ರವಿ ಉದಯ ದಧಿಮಂಥನ
ಮೋದಗೃಹದ ಕೃತ್ಯಾದಿಯಲಿ
ಶ್ರೀಧರಬಲಭದ್ರರೌದಾರ್ಯ ವಿಕ್ರಮ
ಆದರದಲಿ ನಿತ್ಯಪಾಡುವರು ॥ ೩ ॥

ಹರಿದಿನ ನಿರಶನ ನಿರ್ಜಲವ್ರತದಲಿ
ಹರಿಜಾಗರ ಮಾಡಿ ವ್ರಜನಾಥ
ಪರಯುಮುನಾ ಸ್ನಾನವ ಮಾಡುತಿರಲು
ವರುಣದೂತರು ಕಟ್ಟಿಕೊಂಡೊಯ್ಯಲು ॥ ೪ ॥

ಹೇ! ಕೃಷ್ಣ! ರಾಮ! ಎನುತ ಕೂಗಿದರು ಅ-
ನೇಕಾರ್ತಸ್ವರದಲಿ ಗೋವಳರು
ಶ್ರೀಕೃಷ್ಣ ಕೇಳಿ ವರುಣಾಲಯಕೈದಲು
ಶ್ರೀಕಾಂತನ ಕಂಡು ಪ್ರಣಮಿಸಿದಾ ॥ ೫ ॥

ತವಪಿತನರಿಯದೆ ದೂತರು ತಂದರು
ಭವಹರ ತ್ರಾಹಿ ತ್ರಾಹಿ ಪಾಹಿಯೆನುತ
ಸ್ತವಿಸಿದ ಈ ಘನ ಸವೆಯುದ ತಪ್ಪು ಕ್ಷಮಿ-
ಸ್ಯವಲೋಕಿಸು ನಿನ್ನ ಭಟನೆಂದು ॥ ೬ ॥

ಇಂದೆನ್ನ ಜನ್ಮ ಸಫಲವು ಸರ್ವಸಿದ್ಧಿ
ಇಂದಿಗೆ ನಿನ್ನ ಪದವಾರಿಜವ
ಹೊಂದಿದೆ ನಮಿಸಿದೆ ಮಹಿಮೆಯನರಿಯದೆ
ತಂದರು ತಂದೆಯ ತಂದೆ ನಮೋ ॥ ೭ ॥

ಬಲು ಅಪರಾಧವ ಕ್ಷಮಿಸು ದಯಾನಿಧೆ
ಸಲೆ ನಿನ್ನಯ್ಯನ ಗ್ರಹಿಸು ಹರೆ
ಸಲಹೆನ್ನನು ಎಂದು ಬಹಳ ಭಕುತಿಯಿಂದ
ನಳಿನಭವೇಶನ ಪೂಜಿಸಿದಾ ॥ ೮ ॥

ಎನ್ನ ಸಂಶಯವೆಲ್ಲ ದೂರವು ಯದುಪತೆ
ಧನ್ಯನೆನಿಸಿದೆ ತವಾರ್ಚನೆಯಿಂ
ಎನ್ನುತ ಪುನಃ ಪುನಃ ಪ್ರಣಮಿಸಿ ರಮೆಯರ-
ಸನ್ನನ ಪ್ರಸನ್ನೀಕರಿಸಿದನು ॥ ೯ ॥

ಅಪ್ಪಂಗೆ ತಾನಭಯುವನಿತ್ತು ಶ್ರೀಪತಿ
ಅಪ್ಪನಿಗಾಶ್ಚರ್ಯ ತೋರ್ದ ಹರಿ
ಒಪ್ಪುವ ಬಂಧುಬಳಗಕೆಲ್ಲ ಹೇಳಿದ
ತಪ್ಪದೆ ನಂದವ್ರಜಕೆ ಬಂದು ॥ ೧೦ ॥

ಅತ್ಯಾನಂದದಿ ನುಡಿದರು ನಿನ್ನ ಮಗ
ಮುಕ್ತಾಮುಕ್ತವಂದಿತ ಚರಣ
ನಿತ್ಯಾನಂದನ ಈಶ್ವರತ್ವವ ನಾವ್‌
ಪ್ರತ್ಯಕ್ಷ ನೋಡಿದೆವೆಂದರವರು ॥ ೧೧ ॥

ತನ್ನೀಶ್ವರತ್ವದ ಬಗೆಯನು ತಿಳಿಯಬೇ-
ಕೆನ್ನುವ ನಿಜಭಕ್ತಗೋವಳರ
ಬಿನ್ನಹವಾಲಿಸಿ ಬ್ರಹ್ಮ ಹ್ರದದೊಳು
ಚೆನ್ನಾಗಿ ಮುಳುಗಿಸಿ ತೋರಿದನು ॥ ೧೨ ॥

ಅವಿದ್ಯಾ ಕಾಮ್ಯಕರ್ಮವ ಮಾಡಿ ಬಲು ಬಲು
ಹೇವದಿಂ ಸ್ವರ್ಗಭವಕ್ಕೈದುತಿಹ
ಪ್ರಾವೃತರ್ದೂಳಿಯುವ ಮೌನಿಜನಸ್ಥಳ
ದೇವ ತೋರಿದ ಅಪವರ್ಗವನು ॥ ೧೩ ॥

ಅನಂತ ಛಂದಸ್ಸುಗಳಿಂದ ಸ್ತುತ್ಯನನು
ಆನಂದ ಜ್ಞಾನಮಯ ರೂಪನನು
ಆ ನಂದಗೋಪರಾನಂದದಿ ಕಂಡರು
ಆನಂದಯೋಗಮಯಗಾತ್ರಿತರು ॥ ೧೪ ॥

ಅತ್ಯದ್ಭುತ ಮಹಿಮಾತಿಶಯನ ಕೃಷ್ಣ
ಸತ್ಯೇಶಭವ ವಿಪ್ರಾಹಿಪರಿಂ ನುತನ
ನಿತ್ಯಾನಂದ ಪ್ರಸನ್ನವೆಂಕಟ ಕೃಷ್ಣ-
ಭಕ್ತರು ಜೀವನ್ಮುಕ್ತರವರು ॥ ೧೫ ॥

## ಬಂದೆ ಕೇಳೆ ಗೋವಿಂದನಾ

(ಸತ್ಯಭಾಮೆ–ಶ್ರೀಕೃಷ್ಣರ ಸಂವಾದ)

ರಾಗ–ಮಾರವಿ (ಜೀವನಪುರಿ) ತಾಳ–ಆದಿ (ತೀನ್‌ತಾಲ)

ಬಂದೆ ಕೇಳೆ ಗೋವಿಂದ ನಾ | ಇಂದುಮುಖಿ ನಿದ್ರೆ ಬಿಟ್ಟು
ಬಂದು ನೀ ಬಾಗಿಲ ತೆರೆಯೆ ||
ಗೋವಿಂದ ನೀ ಗೋವೃಂದ ಕಾಯಲು ಹೋಗು || ಪ ||

ಸೋಮಕಖಳನ ಕೊಂದು ನೇಮದಿ ವೇದವ ತಂದ |
ಶ್ರೀ ಮತ್ಸ್ಯಾವತಾರ ಬಂದೇನೆ ||
ಮತ್ಸ್ಯನಾದರೆ ಆ ಮಹಾಂಬುಧಿಗೆ ಹೋಗು || ೧ ||

ಸಿಂಧುಮಥನಕಾಲಕ್ಕೆ | ವೃಂದಾರಕರಿಗೊಲಿದ |
ಸುಂದರ ಕೂರುಮ ಬಂದೇನೆ ||
ಸುಂದರ ಕೂರೂಮನಾಗೆ ಮಂದರ ಹೊರಲು ಹೋಗು || ೨ ||

ಪ್ರಳಯಾಂಬುಧಿಗಿಳಿದೊಬ್ಬನ ಸುಲಭದಿ ಕೋರಿಲಿ ಸೀಳ್ದ |
ಚಲುವ ವರಾಹ ಬಂದೇನೆ ||
ಚಲುವ ವರಾಹನಾದರೆ ಇಳೆಯಕೂಡ ಆಡ ಹೋಗು || ೩ ||

ಸೊಕ್ಕಿ ಕಂಬಾ ಒದ್ದು ಗುದ್ದಿದ ರಕ್ಕಸನ ಕರಳಮಾಲೆಯ- |
ನಿಕ್ಕಿದ ನರಹರಿ ಬಂದೇನೆ ||
ಇಕ್ಕಿದ ನರಹರಿಯಾದರೆ ಚಿಕ್ಕವನೊಳಾಡ ಹೋಗು || ೪ ||

ಹೋಮವ ಮಾಡಿ ಮೀರಿದ | ಭೂಮಿಪನ ಸೊಕ್ಕು ಮುರಿದ |
ನೇಮದ ವಾಮನ ಬಂದೇನೆ ||
ನೇಮದ ವಾಮನನಾದರೆ ನೇಮನಿಷ್ಠೆಗೆ ನೀ ಹೋಗು || ೫ ||

ಭೂಭಾರನಿಳುಹಿ ದ್ವಿಜರಿಗೆ ಶ್ರೀಭಾಗ್ಯವ ಕೊಟ್ಟ ಶೌರ್ಯ |
ಶೋಭಿತ ಭಾರ್ಗವ ಬಂದೇನೆ ||
ಶೋಭಿತ ಭಾರ್ಗವನಾದರೆ ಆ ಭೀಷ್ಮನ ಅಂಜಿಸ ಹೋಗು || ೬ ||

ಸೀತೆಗಾಗಿ ರಾವಣನ ಘಾತಿಸಿದೆ ಕೇಳೆ ವಾತ- ।
ಜಾತವಂದ್ಯ ರಾಮ ಬಂದೇನೆ ॥
ಜಾತವಂದ್ಯ ರಾಮನಾದರೆ ಸೇತುಬಂಧನದಲ್ಲಿರಹೋಗು ॥ ೭ ॥

ಸೋಳಾ ಸಾಸಿರ ಗೋಪೆರನಾಳುವ ಸುಪ್ರೌಢ ಶ್ರೀಗೋ- ।
ಪಾಲಕೃಷ್ಣ ನಾನೇ ಬಂದೇನೆ ॥
ಗೋಪಾಲಕೃಷ್ಣನಾದರೆ ಗೋಪಾಂಗನೆರೊಳಾಡ ಹೋಗು ॥ ೮ ॥

ದೃಢದಲ್ಲಿ ತಪವಿದ್ದ ಮಡದೇರ ಮಾನವ ಕದ್ದ ।
ಕಡು ಮುದ್ದು ಬುದ್ಧ ಬಂದೇನೆ ॥
ಕಡುಮುದ್ದು ಬುದ್ಧನಾದರೆ। ಒಡನೆ ಮಿಥ್ಯವ ಪೇಳಿ ಹೋಗು ॥ ೯ ॥

ಪದುಮಾಗಂಧೆ ನಿನ್ನಾರತಿಗೊದಗಿದೆ ಬಿಂಕವಿನ್ಯಾಕೆ ।
ಕುದುರೆ ಏರಿ ಕಲ್ಕಿ ಬಂದೇನೆ ॥
ಕುದುರೆ ಏರ್ದ ಕಲ್ಕಿಯಾದರೆ ಕದನಕ್ಕೆ ಜಾಣ ನೀ ಹೋಗು ॥ ೧೦ ॥

ವಲ್ಲಭನ ನುಡಿ ಕೇಳಿ । ನಲ್ಲೆ ಸತ್ಯಭಾಮೆ ಹರಿಪದ ।
ಪಲ್ಲವಕೆರಗಿ ನಿಂದಾಳು ॥
ಪಲ್ಲವಕೆರಗಿ ಪ್ರಸನ್ವೆಂಕಟ ಚೆಲ್ವಾನೆಂದರಿಯೆನೆಂದಾಳು ॥ ೧೧ ॥

## ಹೈಮಂತದ ಪ್ರಥಮ ಮಾಸದಿ

[ ವಸ್ತ್ರಾಹರಣ ]

ರಾಗ-ರಾಮಕ್ರಿಯಾ (ಭೂಪ) ಅಟತಾಳ (ದೀಪಚಂದಿ)

ಹೈಮಂತದ ಪ್ರಥಮ ಮಾಸದಿ । ಶ್ರೀ- ।
ಸೋಮಶೇಖರನರ್ಧಾಂಗಿಯ ಹೊಂದಿ
ಸೀಮಂತಿನಿಯರರ್ಚಿಸಿದರಂದು । ನಿತ್ಯ ।
ಯಮುನೆಯ ವಾರಿಲಿ ಮಿಂದು ॥ ೧ ॥

ಮಳಲಗೌರಿಯ ಮಾಡಿ ನೋಂತರು | ಮುಂ- |
ಗಳ ಹವ್ಯಾನ್ನವನುಂಡು ಕಾಂತೇರು
ಫಲಪುಷ್ಪಗಂಧ ಮಾಲೆಗಳಿಂದ | ಕೆಂ- |
ದಳಿಲು ಧೂಪದೀಪ ಬಲಿಯಿಂದ || ೨ ||

ನಂದನಾತ್ಮಜ ತಮ್ಮ ಪತಿಯಾಗ | ಬೇ- |
ಕೆಂದುಮೆಯನು ಬೇಡಿದರಾಗ
ಸುಂದರ ಕಾತ್ಯಾಯನಿಯರ್ಚನೆ | ಭಕ್ತಿ- |
ಯಿಂದ ಪ್ರದಕ್ಷಿಣೆ ವಂದನೆ || ೩ ||

ಉಚ್ಚಪಾಡಿ ಹರಿಗುಣ ಕೀರ್ತನೆ | ಮತ್ತೆ |
ನಿಚ್ಚ ನಿಚ್ಚಂಬಿಕೆಯಳ ಪ್ರಾರ್ಥನೆ
ಅತ್ಯಂತ ಯಾಚನೆಯ ತಿಳಿದನು | ಈ |
ಅಚ್ಯುತನಲ್ಲಿಗೆ ಬಂದನು || ೪ ||

ಯೋಗಿಜನೇಶ್ವರ ಕಂಡನು | ಅವರ್ |
ನೀಗಿದಂಬರವೆತ್ತಿಕೊಂಡನು
ಭಾಗ್ಯೆಯರ್ ಮಿಂದು ಬಾಹನ್ನಕಾ | ಕೃಷ್ಣ |
ವೇಗದಿ ನೀಪವಡರಿ ನಕ್ಕ || ೫ ||

ಮೊಗುವ ಬಾಲೆಯರ ನೋಡಿ ನಗುತಿದ್ದ | ಬಲು |
ಸುಗುಣೇರು ಬನ್ನಿರಿಲ್ಲಿಗೆ ಎಂದ
ತೆಗೆದುಕೊಳ್ಳಿರಿ ನಿಮ್ಮಾಂಬರವೆಂದ | ಸರ್ವಾಂ- |
ಗಳ ಮಾತಿಲಿ ಶ್ರೀಗೋವಿಂದ || ೬ ||

ನಿಮ ನಿಮ್ಮುಡಿಗೆಯ ನಿಮಗೀವೆ | ಬನ್ನಿ |
ಶ್ರಮವೇಕೆ ನೀರೊಳಗೆ ನೀವೆ
ಹಿಮವು ವ್ರತಸ್ಥೆಯರಿಗೆ ಕಷ್ಟ | ಅ- |
ಕ್ರಮವಿನ್ನು ಅಕಟಾಯೆಂದನು ಕೃಷ್ಣ || ೭ ||

ಕಾಮಜನಕನ ನರ್ಮಕೆ ನಾಚಿ । ಆ ।
ಕಾಮಿನಿಯರಿಗೆ ಕಾಮವು ಹೆಚ್ಚಿ
ಶಾಮಸುಂದರ ನಿನ್ನ ದಾಸೇರು । ಎಲೆ- ।
ಸ್ವಾಮಿ ನಾವು ವಿವಸ್ತ್ರೆಯರು ॥ ೮ ॥

ಅಚ್ಯುತ ನಮ್ಮುಡಿಗೆಯ ನೀಡೈ । ನಿ- ।
ಮ್ಮಿಚ್ಛಾನುಗೆಯರು ಕನ್ಯೆಯರು ನೋಡೈ
ಸಚ್ಚಿದಾನಂದ ನಂದಜ ಸಾಕು । ಶ್ರೀ- ।
ವತ್ಸಲಾಂಛನ ಬಿನ್ನಹ ಪರಾಕು ॥ ೯ ॥

ಕೋಮಲೆಯರು ಬಲು ತೋದೆವು । ಧರ್ಮ- ।
ಧಾಮ ಚಳಿಗೆ ಮುಟ್ಟಗಾದೆವು
ಸ್ವಾಮಿ ನಂದಗೆ ಹೇಳ್ವೆವು ಕೇಳೈ । ನಿಮ್ಮ ।
ಕಾಮಿಸುವೆವು ವಸ್ತ್ರವ ನೀಡೈ ॥ ೧೦ ॥

ದಾಶಾರ್ಹ ಕನ್ಯೇರಿಗೆಂದನು । ವ್ರ- ।
ಜೇಶಗೆ ಹೇಳಿ ಮಾಡುವುದೇನು
ದಾಸೇರಾದರೆ ಬನ್ನಿ ಬಳಿಗೀಗೆ । ನಿಮ್ಮ ।
ವಾಸಂಗಳನು ಕೊಡುವೆನು ಬ್ಯಾಗೆ ॥ ೧೧ ॥

ಶೀತದಿಂದೆರಡು ಅಂಗೈ ಹಚ್ಚಿ । ರತಿ- ।
ನಾಥನ ಸದನದ ಕದ ಮುಚ್ಚಿ
ಸೋತು ಲಜ್ಜೆಯನೀಗಿ ಮುಖದಲಿ । ಕಾಳಿಂ- ।
ದೀತೀರ್ಥ ಉಳಿದು ಪರಿಯಿದ್ದಲ್ಲಿ ॥ ೧೨ ॥

ಬಂದು ಭೂರುಹಡೆಡೆಗೆ ನಿಂತಿಹ । ಬಂದ ।
ಸುಂದರಿಯರ ಭಾವ ತಿಳಿದಿಹ
ಇಂದುಮುಖಿಯರ ದಿವ್ಯಾಂಬರ । ತನ್ನ- ।
ಸ್ಕಂಧದಲಿಟ್ಟ ವಿಶ್ವೇಶ್ವರಾ ॥ ೧೩ ॥

ಸ್ನೇಹಾವಲೋಕದಿ ನೋಡಿದಾ । ವಸ್ತ್ರ।
ದೇಹಿಕರೊಳು ಮಾತನಾಡಿದ
ಹೇ ಹರಿಣಾಕ್ಷೇರೆ ಕೇಳಿರೆ । ಅಂಬಿ- ।
ಕಾಹೇಲನವ ಮಾಳ್ಪ ಚಲುವೆಯರೆ ॥ ೧೪ ॥

ನಗ್ನ ಮಿಂದಪರಾಧ ಕ್ಷಮಿಸೆಂದು । ಕರ- ।
ಯುಗ್ಮವ ಮುಗಿದು ಬೇಡಿರಿ ಬಂದು
ವಿಘ್ನೇಶನಮ್ಮಗೆ ಬೇಡಲು । ನಿಮ್ಮ- ।
ನಘ್ನಾಂಬರವೀವೆ ಈಗಲು ॥ ೧೫ ॥

ಕೇಳಿ ಕೆಲದೆರೊಂದು ಕರದಲಿ । ಇಂದು- ।
ಮೌಳಿಯರ್ಧಾಂಗಿಗೆ ನಮಿಸಲಿ
ಶ್ರೀಲೋಲನವರ ತಿರಸ್ಕರಿಸಿದಾ । ಎರಡು ।
ತೋಳೆತ್ತಿ ನಮಿಸಿ ಪ್ರಾಂಜಲಿಲೆಂದ ॥ ೧೬ ॥

ಎಂದ ಮಾತಿಗೆ ಲಜ್ಜಿಸಿದರು । ಬಾಹು- ।
ದ್ವಂದ್ವವೆತ್ತ್ಯಭಿವಂದಿಸಿದರು
ಇಂದಿರೇಶಗೆ ವಸ್ತ್ರ ಬೇಡಲು । ಪ್ರೀತಿ- ।
ಯಿಂದಿತ್ತ ಬೇರೆ ಬೇರೆ ದಯಾಳು ॥ ೧೭ ॥

ತಮ್ಮ ತಮ್ಮಾಂಬರವನು ಉಟ್ಟರು । ಶ್ರೀ ।
ಕಮಲಾಕ್ಷನಲಿ ದೃಷ್ಟಿಯಿಟ್ಟರು
ಸುಮುಖನ ಲಜ್ಜೆಯಿಂದೀಕ್ಷಿಸಿ । ಶ್ರೀ- ।
ರಮಣನ ಸಂಗವಪೇಕ್ಷಿಸಿ ॥ ೧೮ ॥

ನವಸಂಗಮದೋರೆನೋಟದಿ । ಅಂ- ।
ಭ್ರುವನಜ ಸ್ಪರ್ಶೇಚ್ಛೆಯನು ಹೊಂದಿ
ಯುವತೆ ವ್ರತಸ್ಥರ ನೋಡಿದ । ಸಂ- ।
ನವರಸವಾರ್ಧಿಲಿ ರಮಿಸಿದ ॥ ೧೯ ॥

ವೇದೋಕ್ತಿಯಂತೆ ಕಾಮಿನಿಯರ್ಕಾಮ | ವಿತ್ತ |
ವೇದೇಶ್ವರನು ಪೂರ್ಣಕಾಮಾ
ಬೋಧಿಸಿದನು ತನ್ನರ್ಚನೆ ಫಲ | ಪ್ರಾಪ್ತ- |
ವಾದುದು ನಡೆಯೆಂದ ಶ್ರೀಲೋಲ || ೨೦ ||

ನಂದಜನಾಜ್ಞದಿ ಬಂದರು | ತಮ್ಮ |
ಮಂದಿರಕೆ ಚಂದ್ರಮುಖಿಯರು
ಸುಂದರ ಪ್ರಸನ್ವೆಂಕಟೇಶನ | ನಂಬಿ- |
ನಂದಿಸಿದರು ಕನ್ಯೆರನುದಿನ || ೨೧ ||

## ವೇಣು ಗೋಪಾಲನ ವೇಣು ವರ್ಣಿಪರು
### [ ವೇಣುಲೀಲೆ ]

ರಾಗ-ಕನ್ನಡಗೌಳ (ಭೈರವಿ) ಅಟತಾಳ (ಕಹರವಾ)

ವೇಣುಗೋಪಾಲನ ವೇಣು ವರ್ಣಿಪರು
ಜಾಣೆ ಗೋಪೇರೆಲ್ಲ ಗಾನಾಮೃತವುಂಡು
ಬಾಣಪಂಚಕನ ಬಾಣದಟ್ಟುಗಳಿಗೆ
ಪ್ರಾಣ ಡೆಂಢೆಣಿಸಿ ಧ್ಯಾನಿಪರು || ಪ ||

ಎಳೆನೇಸರ್ಗಳ ಬಳಗದಂತಿಪ್ಪ
ಹೊಳೆವ ರತುನ ಮೌಳಿ ಕುಂಡಲ್ಗಳ
ಬೆಳಗಲಿಹ ಕಪೋಲದ ಕಾಂತಿ ಪ-
ವಳದುಟಿಯಲ್ಲಿ ಬಿಂಬಿಸಲು
ನಳಿನದಳವ ಪೋಲುವ ನೇತ್ರಭ್ರೂ
ವಿಲಾಸಾಪಾಂಗದಿ ಕೊಳಲನಾದಿಪ
ಶಳಿರು ಬಳುಹ ಮಲ್ಲಿಗೆದಂಡೆ ಗೊಂ-
ಚಲುಗಳ ಗುಂಜೆದೊಂಗಲಿನ || ೧ ||

ವಾಮ ಬಾಹುವಿನೆಲಿ ವಾಮಗಂಡಾವಿಟ್ಟು
ಹೇಮವೇಣೂರಂಧ್ರವಾ ಮುಟ್ಟಿ ಅಂಗುಲಿ
ನೇಮದಲಿ ಸರಿಗಾಮಪಧಾನಿ
ಆ ಮಂಜುಳಸ್ವರ ನುಡಿಸಲು
ರಾಮೆಯುಂಬಾಧರ ಸೋಮರಸಾವನ್ನು
ಪ್ರೇಮದಿ ಸವಿವ ಶ್ರೀಮದ್ವೇಣುವಿಲಿ
ಈ ಮಹಾಭಾಗ್ಯವ ಕಾಮಿನೇನೋಡಿರೆಂ-
ದೂ ಮಾತನಾಡುವರ್ ರಾಮೇಯರು ॥ ೨ ॥

ಬ್ರಹ್ಮಗಂಧರ್ವಗಾನ ಮೀರುವಾ ಗೀತಾ
ಅಮರ ಗಂಧರ್ವರಮರನಾರೇರು
ಉಮ್ಮಯದಿಂ ಕೇಳಿ ಸಮ್ಮೋಹಿಸಿದರು
ಈ ಮಹಿಯಾ ವ್ರಜರಮ್ಮಣೇರು
ಬ್ರಹ್ಮಗಚ್ಚರಿಯ ರಮೆಯರಸನ್ನ
ಸನ್ಮಾರ್ಗಿಯಾ ವೇಣು ಸುಮೂರ್ಛೆಯಿಂ ಕೇಳಿ
ಸುಮೃಗಪಕ್ಷಿಗಳ್ ತಾಮ್ಮರುಳಿಟ್ಟವು
ರಮ್ಯಾರಣ್ಯದಿ ತಂತಮ್ಮೊಳು ॥ ೩ ॥

ಚೂತಪ್ರವಾಳಾಬರ್ಹೋತ್ಪಲತಾವರೆ
ಪ್ರೀತಿಲಿ ಮೂಡಿದ ನಾಥಗೋಪಾಲನ
ಗೀತಕೆ ಭೂರುಹವ್ರಾತ ಲತೆಗಳು
ಸೋತು ಅಶ್ರುಮೋಕ್ಷವಾತವು
ಆತನ ನೀಲ ಜೀಮೂತಾಂಗ ವೀಕ್ಷಿಸಿ
ಪೂತ ನವಿಲ್ಗಳ ಯೂಥವು ನರ್ತಿಸೆ
ಶ್ರೋತರಕಮೃತವಾತ ಹುಲ್ಲೆಗಳು
ಜಾತಾನಂದದಿಂದ ಕೂತವಂದು ॥ ೪ ॥

ಗೋವಿಂದಾಟವಿಲಿ ಗೋವಿಂಡುಗಳನು
ಕಾವುತ ಸ್ವರ್ಣಮಯಾ ವೇಣು ನಾದಿಸೆ
ಆವು ಕಿವಿಗೊಟ್ಟು ಯಾವಸವಂ ಕಚ್ಚಿ-
ತಾ ವತ್ಸವಂ ಬಿಟ್ಟು ಹುಚ್ಚನಿಟ್ಟು
ಆವೇಕ್ಷಿಸಿ ಕೃಷ್ಣಲಾವಣ್ಯಸುಧೆಯ
ಸೇವಿಸಿ ನೇತ್ರದಿ ತೀವಿದಾನಂದದಿ
ತಾವಶ್ರುಗರೆದವು ಭಾವುಕ ಜನರ
ಭಾವದಿ ಲಾಂಗೂಲಗ್ರೀವವೆತ್ತಿ || ೫ ||

ದೇವನಾರಿಯರ ನೀವಿ ಸಡಿಲ್ದವು
ಭಾವೇರ ಮುಡಿಯ ಪೂವು ಜಲ್ಲಿದವು
ಭಾವಜನಂಬಿಗೆ ಆ ವೆಂಗಳ್ದುಚ್ಚಿಟ್ಟು
ಶ್ರೀವೇಣುವಿನ ರಸವನುಂಡು
ಗೋವೇರ ಸುಕೃತ ದಾವದೊ ರಂಗನ್ನ
ಸೇವೆಗೆ ಸನ್ನದ್ಧಳಾ ವೇಳೆ ಕಾಳಿಂದಿ
ತಾ ವೇಗಬಿಟ್ಟೂರ್ಮಿ ಬಾಹ್ವಿಂದಲಪ್ಪಿದಳ್
ದೇವನಂಘ್ರಿವನಜಾವನಂದು || ೬ ||

ಶ್ರೀವರ ಶ್ರೀಕೃಷ್ಣಾಟವಿಯ ಸಂಚರಿ-
ಸುವಾಗ ಪಾದರಾಜೀವದ ಗಂಧವು
ಭುವಿಯ ತೃಣಾದಿ ಸವ್ಯಾಪಿಸಿರಲು
ದೇವ ಪುಳಿಂದೆಯುತಾರ್ಪದನು
ಗ್ರೀವ ಕುಚದಲಿಟ್ಟು ವಾಸುದೇವನ
ಪಾವನಚಾರಿತ್ರೆ ಭಾವಭರಿತರಾ-
ಗಾವಳಿಮಾರ್ಗದಿ ಕೋವಿದರ್ಕೇಳಿದರ್
ದೇವಗಂಧರ್ವರ ಠೀವಿಯಲಿ || ೭ ||

ಮೇಘಶ್ಯಾಮಲನ ರಾಗರಸಾಮೃತ
ಭೋಗಗನಾ ತುಂಬಲಾಗ ದೇವರ್ಕಳು
ಆಗಸದಿಂ ಪೂಮಳೆಗರೆದರರ್ಥಿ-
ಯಾಗಿರೆ ಸಾಧುಗಳೌಘ ಕಂಡು
ಮೇಘಾಳಿ ರಂಗನ ಮೇಗಾತಪತ್ರಂಗ-
ಳಾಗಿರ್ದವಲ್ಲಿಯ ಗೋಗೋಪ ಗೋವೇರು
ಆ ಗೋವರ್ಧನಾದ್ರಿ ಭಾಗಧೇಯಕೆ ತಲೆ-
ದೂಗಿದರು ಸ್ವರ್ಗಾಗಾರೆಂದು || ೮ ||

ಅನಂತ ಬ್ರಹ್ಮಾಂಡವನ್ನಾಳ್ದ ದೇವ ಗೋ-
ಕಾನನ ದಾಟನೆ ಗೋನೀಕ ರಕ್ಷಣೆ
ಮಾನವಲೀಲೆಗದೇನು ಭೂಷಣವೋ
ತಾನಣ್ಣನೊಡನೆ ವಿನೋದಕೆ
ಆ ನಂದಯಶೋದೆಯ ಸೂನುವೆನಿಸಿದ
ಆನಂದಶತಕ ನಾನಾದಿಜನಕ
ಶ್ರೀನಾಥ ಗೋಪಕಾಮಿನೀಯರಾಳ್ವ ದ-
ಯಾನಿಧೆ ಪ್ರಸನ್ವೆಂಕಟ ಕೃಷ್ಣ || ೯ ||

## * ಮಹಾಬಾಹುಶಾಲಿ ಕೇಳು

[ ಸತ್ರದಡಿಗೆಯ ಊಟ ]

* ಇದು ಭಾಗವತದ ಕಥಾಭಾಗವು. ಕೃಷ್ಣನು ಒಂದು ದಿನ ಗೋಪರೊಡನೆ ಅಡವಿಯಲ್ಲಿ ವಿಹಾರಗಯ್ಯುತ್ತಿದ್ದಾಗ ಗೋಪರು ಹಸಿವೆಯಿಂದ ಬಳಲುತ್ತಾ ಬಲರಾಮ ಕೃಷ್ಣರಿಗೆ ಅನ್ನವನ್ನು ಕೇಳಿದರು. ಬ್ರಾಹ್ಮಣ ಸ್ತ್ರೀಯರನ್ನು ಉದ್ಧರಿಸುವ ಕಾಲವಿದೆಂದು ಕೃಷ್ಣನು, ಗೋಪರನ್ನು ಸಮೀಪದ ಆಂಗಿರಸವೆಂಬ ಸತ್ರವನ್ನು ನಡೆಸಿರುವ ಬ್ರಾಹ್ಮಣರ ಕಡೆಗೆ ಕಳಿಸಿದನು. ಅಜ್ಞಾನಿಗಳಾದ ಆ ಬ್ರಾಹ್ಮಣರು ಗೋಪರನ್ನು ತಿರಸ್ಕರಿಸಿದರು. ನಂತರ ಬ್ರಾಹ್ಮಣ ಸ್ತ್ರೀಯರೆಡೆಗೆ ಹೋಗಿ ಆ ಗೋಪರು ಅನ್ನಬೇಡಲು ಯಜ್ಞಕ್ಕಾಗಿ ತಯಾರಿಸಿದ ಅನ್ನವನ್ನಿತ್ತರು. ಅವರ ಭಕ್ತಿಗೆ ಕೃಷ್ಣಮೆಚ್ಚಿದ.

ರಾಗ– ಸೌರಾಷ್ಟ್ರ (ಬಾಗೇಶ್ರೀ) ಏಕತಾಳ (ಝುಂಪ್)

ಮಹಾಬಾಹುಶಾಲಿ ಕೇಳು ರಾಮಾ ರಾಮಾ | ದುಷ್ಟ-
ದಾಹಕ ಶ್ರೀಕೃಷ್ಣ ಕೇಳ್ ಪೂರ್ಣಕಾಮಾ
ಬಹಳ ಬಾಧಿತರಾದೆವು ಕ್ಷುಧೆಯುಲೀಗ | ನಿರು-
ವಾಹಾ ನಮ್ಮಿಂದಲೆಂದರ್ ಗೋವರಾಗ ॥ ೧ ॥

ಹೀಗೆಂದ ವಿಜ್ಞಾಪನೆಯ ಕೇಳಿ ಶೌರಿ | ದಯಾ-
ಸಾಗರ ನಿರೂಪಿಸಿದ ದುಃಖಹಾರಿ
ಯಾಗಶಾಲೆಯಲ್ಲಿ ಸತ್ರವೆಂದು ನೀವು | ಹೋಗಿ
ಯಾಗಿಗಳಿಗನ್ನ ಬೇಡಿ ಪೇಳ್ದಿವಾವು ॥ ೨ ॥

ಯಜ್ಞಪತಿಯಾಜ್ಞೆಯಿಂದ ಯಜ್ಞಕ್ಕೈದಿ | ಋತ್ವಿ-
ಜರ್ಗೆ ಅನ್ನವ ಬೇಡಿದರ್ ಸುವಿನಯದಿ
ಸ್ವರ್ಗಕಾಮಾಕರ್ಮರವರು ಮತ್ತರಾಗಿ | ಬಾಲ-
ಕರ್ಗೆ ಗರ್ಜಿಸಿದರು ವಿನಯವಾ ನೀಗಿ ॥ ೩ ॥

ಕಾಲವಲ್ಲವೆಂದು ನಾಸ್ತಿಕರು ನುಡಿಯಲು | ಗೋ-
ಪಾಲಕರು ತಿರುಗಿಬಂದು ಹರಿಗೆ ಹೇಳಲು
ಬಾಲೆಯರ್ಗೆ ಬೇಡಿ ಪುರುಷರನ್ನು ಬೇಡದೆ | ಯಾಗ-
ಶಾಲೆಗೈದಿ ಪುನರಪಿ ಅನ್ನ ಬೇಡಿರೆಂದ ॥ ೪ ॥

ಕೃಷ್ಣನಾಜ್ಞೆ ಕೇಳಿ ಬಾಲೆರು ಹೃಷ್ಟಮನದಲಿ | ಶ್ರೀ |
ಕೃಷ್ಣನ ಸಂದರ್ಶನಾಶೆ ಮಾಳ್ಪ ಭರದಲಿ
ಮೃಷ್ಟೋದನ ಭಕ್ಷಪಾಯಸಾಜ್ಯ ಕ್ಷೀರವು | ಯ-
ಥೇಷ್ಟ ಶಾಕಪಪ್ಪಡಪಳಿದ್ಯಾದಧಿವ್ಯಂಜನವು ॥ ೫ ॥

ತಂಡತಂಡದ್ಹರಿವಾಣಗಳ ಜಪಕದೊಳಗೆ | ತುಂಬಿ-
ಕೊಂಡು ಬಂದರಿಂದುವದನೇರ್ಹರಿಯಿದ್ದೆಡೆಗೆ
ಗಂಡರ ಮಕ್ಕಳ ಆಪ್ತರೆಲ್ಲರ ಬಿಟ್ಟು | ಶ್ರೀ- |
ಪುಂಡರೀಕನಯನನಂಘ್ರಿಯಲ್ಲಿ ಚಿತ್ತಿಟ್ಟು || ೬ ||

ಬ್ರಾಹ್ಮಣಿಯರು ಷಡ್ರಸದನ್ನ ತಂದು ನಮಿಸಲು | ಪರ- |
ಬ್ರಹ್ಮನುಂಡ ಗೋಪಾಲಕರ ಕೂಡಿ ದಯಾಳು
ಬ್ರಹ್ಮಜ್ಞನಾರಿಯರ ಭಕ್ತಿರಸವನುಂಡನು | ಅವರ್ಗೆ- |
ಬ್ರಹ್ಮನಿರ್ವಾಣವನಿತ್ತ ಪುರುಷಶೌಂಡನು || ೭ ||

ಮತ್ತೊಬ್ಬಳು ಬಾಹನ್ನಕ ಗಂಡ ತರುಬಲು | ಆಕೆ |
ಮುಕ್ತಿಪತಿಯ ನೆನೆದು ತನ್ನ ಪ್ರಾಣಬಿಟ್ಟಳು
ಇತ್ತ ಯಜ್ಞಪತ್ನಿಯರನ್ನವಿತ್ತು ಕೃಷ್ಣನ | ಗುಣ- |
ಕೀರ್ತನೆ ಪಾಡಿ ಪರವಶದಲ್ಲಿದ್ದರಾ ದಿನ || ೮ ||

ಗೋಗೋವರ ಬೆರಿಸಿ ಕೃಷ್ಣ ವ್ರಜಕೆ ತೆರಳಲು | ಈ- |
ನಾಗಗಮನೆಯರ್ಹಜ್ಜೆ ಮುಂದಕ್ಕೇಳದಿರಲು
ಯೋಗಿಧ್ಯೇಯ ವಿಶ್ವನಾಥನವರ ಮನ್ನಿಸಿ | ಪೋಗ- |
ಲಾಗ ನಾರಿಯರ್ ತಮ್ಮ-ತಮ್ಮ ವಾಟ ಹೊಂದಲು || ೯ ||

ಯಜ್ಞದೀಕ್ಷ ಮುನಿಗಳವರ ಭಾವವಂತರು | ತಮ್ಮ |
ಅಜ್ಞವೃತ್ತಿಯನ್ನು ನೆನೆದು ಖಿನ್ನರಾದರು
ಯಜ್ಞೇಶ್ವರರಿಗೀಶ್ವರನಾವಜ್ಞ ಮಾಡಿದ | ಅನ- |
ಭಿಜ್ಞರಾವು ನಮ್ಮ ಕರ್ಮಧಿಗಧಿಗೆಂದರು || ೧೦ ||

ತಮ್ಮಹೆಂಗಳ ಸುಕೃತಕ್ಕೆ ಒಪ್ಪಿಕೊಂಡರು | ಇನ್ನು |
ನಮ್ಮ ಜ್ಞಾನಯೋಗ ತಪವು ಸುಡುಸುಡೆಂದರು
ಬ್ರಾಹ್ಮಣರು ಪಶ್ಚಾತ್ತಾಪರಾಗಿ ನುಡಿದರು | ಪೂರ್ಣ- |
ಬ್ರಹ್ಮಪ್ರಸನ್ವೆಂಕಟ ಕೃಷ್ಣನ ಒಲಿಸಿಕೊಂಡರು || ೧೧ ||

# ಕಾಮನಯ್ಯನ ಕಾಮಿನಿಯರ

## [ ರಾಸಕ್ರೀಡೆ ]

ರಾಗ–ಕೇದಾರಗೌಳ (ದೇಸ್) ತಾಳ–ಜಕ್ಕಣಿ (ದಾದರಾ)

ಕಾಮನಯ್ಯನ ಕಾಮಿನಿಯರ
ಕಾಮುಕ ಭಕ್ತಿಯೆ ಮುಕ್ತಿ
ಸೋಮ ಕುಲಾಬ್ಧಿ ಸೋಮ ನೀರದ
ಶಾಮನ ಪ್ರೇಮಪಾತ್ರರು ‖ ಪ ‖

ಮುಗ್ಧಾಂಗಿಯಳ ಮುಖವನು ಪ್ರಿಯನು
ಸ್ನಿಗ್ಧ ಸುಹಾಸದಲಿ ಚುಂಬಿಸುವಂತೆ
ದುಗ್ಧಾಬ್ಧಿಯ ಜಾತನುದಯದಲಿ ಪ್ರಾಕ್-
ದಿಗ್ವಧು ಸಂಗನು ಮೆರೆಯಲು

ಸುಗ್ಗಿಯಾಯಿತು ಗೋಪಾಲಕರ ವಧು-
ವರ್ಗಕೆಯೆಲ್ಲ ಕಬ್ಬುಬಿಲ್ಲಿನವನ ಸು-
ಮಾರ್ಗಣಕ್ಕೆ ಮರುಳುಗೊಂಡರಾಗವರ್
ಉಗ್ಗಡ ವೇಣುನಾದಕ್ಕೆ ‖ ೧ ‖

ಕುಸುಮತರುಲತಾಖ್ಯ
ಶಿಶುಗಳಸೆವ ಕರಸ್ಪರ್ಶದಿಂದಲಿ
ಶಶಿಯು ಪರಾಮೃಶವ ಮಾಡಿ
ಸುಸುಖವೀವ ತೆರದಲಿ

ಪಸರಿಸಿದನು ಶೀತ ಕಿರಣಗಳ್
ಬಿಸಜಸಖನ ತಾಪವಡಗೆ
ಶಿಶಿರ ಋತುವಿನ ಯಶಸು ವನದಿ
ಶಶಿಮುಖಿಯರೆದೆಗೆ ಇಸಿತು ‖ ೨ ‖

ಶ್ರೀಕರನವಾರುಣ ಕುಂಕುಮದಿಂದ
ಲಕುಮಿ ಮುಖವು ಒಪ್ಪುವ ತೆರದಿ
ಸುಕಲಾನಿಧಿಯು ಬಿಂಬವ ವನದಿ
ಶ್ರೀಕೃಷ್ಣ ಕಂಡು ವೇಣುವನು
ಬೇಕಾದ ವಾಮದೃಕ್ಕೆಯರಿ ಗೋಸುಗ-
ನೇಕ ಮಂಜುಳ ರಾಗಂಗಳ ನುಡಿಸಿದ
ಆ ಕಾಂತೆಯರಾಗ ಕೇಳಿದರು ಮಾರಸಾ-
ಯಕದಿ ಉರುಚಿತ್ತವೇಗದಿ || ೩ ||

ನೂಕಿ ಲಜ್ಜೆಯನು ನಡೆದರೆಲ್ಲಾರು
ಶ್ರೀಕಾಂತನನ್ನೊಡಗೂಡಲಾಗಿ ಮನೆ-
ಯಾ ಕೆಲಸವನು ಬಿಟ್ಟು ಮೋಹಿಸಿದರ್
ಮಕ್ಕಳು ಸ್ವಕೀಯ ಪುರುಷರ
ಆಕಳ ಕರೆಸಿ ವೃಷಕೆ ಮುರುವ-
ಹಾಕಿ ಶಿಶುಗಳಾಕ್ರೋಶವ ಕೇಳದೆ
ತೋಕರೆಂದಳತಿ ಮಾನವೆತ್ತಿಕೊಂಡು
ರಾಕಾಚಂದ್ರಾಸ್ಯೆಯರು ನಡೆದರು || ೪ ||

ಕರೆದ ಹಾಲ ಬಿಸುಟು ತಮ್ಮಯ
ತರಳರ್ಗೆ ಮೊಲೆಪೂರ್ಣ ಕೊಡದೆ
ಪರಿವೇಷಣವ ಮಾಡುತ ಬಿಟ್ಟರು
ಹರಿಯ ಕೊಳಲ ಧ್ವನಿ ಕೇಳಿ
ಕರವಲಯವ ಕಾಲಿಗಿಟ್ಟುಕೊಂಡು
ಚರಣ ಭೂಷಣ ಕೈಗೆ ಸಿಕ್ಕಿಸಿ
ಕರಣಕುಂಡಲ ನಾಸದಲಿಟ್ಟು
ಬರಿಯ ಮೂಗುತಿ ಕಿವಿಗಿಟ್ಟು || ೫ ||

ಕೊರಳವಮಾಲೆಯುನೆ ಕಟಿಗೆ ಸುತ್ತಿ
ಕೊರಳಿಗೆ ಕಾಂಚೀದಾಮವ ಹಾಕಿ
ನೆರೆ ನಿವಾರಿಸುವರನು ನೂಕಿ
ಪರಮಪುರಷನೈದಿದರು
ಭವನಧವನಬಿಟ್ಟು ಸಿರಿ ಮಾ-
ಧವನ ಭಕುತಿ ನಟ್ಟು ವಿರಹದಾ-
ಹದಿಕ್ಕೊಂದು ವಿಷ್ಣುಭಾವುಕೆ-
ರವರು ವೇಣುರವರಸ- || ೬ ||

ಸವಿದು ಪ್ರಿಯವಿಯೋಗ ದುಸ್ಸಹ
ಲವ ಯುಗವೆಂದು ಗುಣತ್ರಯಂಗಳ
ಹವಣ ಮುರಿದು ಜಾರಭಕುತಿ-
ಭಾವದಿ ಅಚ್ಯುತನ ನೆನೆದರು
ಅವ್ಯಕ್ತ ಪ್ರಮೇಯ ಗುಣಗಣಾಬ್ಧಿಯು
ಸುವ್ಯಕ್ತಮಾಡಿದ ಕಾಮಿನಿಯರ್ಗೆ ಸ್ನೇಹ
ನವ್ಯನವ್ಯಸುಖವವರ್ಗಿತ್ತ ನಿರ್ಲಿಪ್ತ
ಭಾವ್ಯಜ್ಞಾನಾತ್ಮಮೂರುತಿ ದೇವಾ || ೭ ||

ದಿವ್ಯಜ್ಞಾನವು ಭಕ್ತಿಭರಿತಗೋವರ್ಗೆ
ದಿವ್ಯಜ್ಞಾನೋಪದೇಶವನು ಮಾಡಿದ
ದಿವ್ಯಜನ ಗುರು ಮೋಹಿಸಿದನು ಕಾ-
ಮವ್ಯಥೆ ಉದ್ರೇಕವಾಗುವಂತೆ-
ಆ ಗೋಪನಾರಿಯರ ನೋಡಿ ಮುಕುಂದ
ಈಗಾಗ ಮನವೇಕೆಂದ ನಿಮಗೆ ಭೀಕರ-
ದಾಘೋರರಾತ್ರಿಲಿ ದುಷ್ಟಪಿಹಾರವು
ನಾಗಾರಿ ಮಧ್ಯೆಯರ್ಗುಚಿತವಲ್ಲ || ೮ ||

ಬೇಗದಿ ನಿಮ್ಮಾಪ್ತರು ಅರಸಿ ಕಾಣ-
ದಾಗಿದ್ದು ಖೇದ ಮಾಳ್ಪುದೇ ಅಧರ್ಮವು
ಸಾಗಿ ಬಂದುದಕೆ ಕಂಡಿರಿ ನಮ್ಮನು
ಪೂಗೊಂಚಲು ತರುಲತೆಗಳ
ರಮ್ಯವನವು ಪಲ್ಲವಶಾಖೆಕುಂಜ
ಧರ್ಮಾನುಜಾವೇಗ ಸೌಂದರ್ಯ ನೋಡಿ
ನಿಮ್ಮ ಮುಖಭಾಲಕಾರ್ಕ ದೀಪದಲಿಯೆ
ನಿಮ್ಮಾಳ್ವತ್ತೆಮಾವ ಪುರುಷರ ॥ ೯ ॥

ಸಮ್ಮತವಲ್ಲ ಉಪೇಕ್ಷೆಯು ಸ್ತ್ರೀಯರ
ಜನ್ಮಕೆಪರ್ಯರ ಸೇವೆಯೇ ಮುಖ್ಯವು
ಧರ್ಮವಲ್ಲನ್ಯ ಪುರುಷರ ಸೇವೆಯು ಸಖ್ಯ
ಸಂಭಾಷಣ ಸಹವಾಸವು
ಸನ್ನೀಕ್ಷಣ ಶ್ರವಣ ಕೀರ್ತನೆಧ್ಯಾನದ
ಪುಣ್ಯವೆ ಅಧಿಕವಾಮುದಸೇವೆಗೆ
ಸನ್ನಿಕರ್ಷಣ ಫಲವಧಿಕವಲ್ಲ
ಇನ್ನೈದಿರೆಂದು ಹರಿ ನುಡಿದರೆ ॥ ೧೦ ॥

ಕನ್ಯೆಯರಿಗೆ ಹೃತ್ತಾಪವಡರಿತು
ಇನ್ನೇಕೀಜನ್ಮವೆನುತಾರ್ತಸ್ವನದಿ
ಚಿನ್ಮಯ ಹರೆ ವ್ಯರ್ಥವಾಯಿತು ಎಂದು ವಾಕ್-
ಸನ್ನಿರೋಧರಾಗಿ ತಲೆಬಾಗಿ
ಕಣ್ಣಿಲಿ ಅಶ್ರುತುಂಬಿ ಬಂದು ಧಾರಿಟ್ಟವು
ಪೊನ್ನಗೊಡವೊಲೆಯು ಗಂಧಾನುಲೇಪದ
ಹೊನ್ನಕುಪ್ಪಸವ ತೊಯಿಸಿದವಿಳೆಯು
ಕನ್ಯೆಯರುಂಗುಟದಿ ಲೇಖಿಸುತ್ತ ॥ ೧೧ ॥

ಇಷ್ಟವಲ್ಲೈ ಖಳ ನೃಶಂಸರಾ ಮಾತು
ಕಷ್ಟದಿ ನೊಂದೆವು ಸಮಸ್ತ ವಿಷಯ
ಬಿಟ್ಟುಬಂದಿಹೆವು ನಿನ್ನಂಘ್ರಿಮೂಲವ
ಮುಟ್ಟಿ ಪೂಜಿಪೆವೆಂದೆಮ್ಮ ಮನವು
ಕೃಷ್ಣನಿನ್ನುಳಿದು ಅನ್ಯಾಶ್ರಯ ಕಾಣೆವು
ಶಿಷ್ಟರಾರ್ತಬಂಧೋ ಕೇಳೊ ಮುಮುಕ್ಷುರ್ಗೆ
ನಿಷ್ಠೆ ನಿಮ್ಮಲ್ಲಿದ್ದು ಸ್ಥಿತಿಯಾಸ್ಥಿತಿಯ
ಕೆಟ್ಟಾಸೆಯೇಕಿನ್ನು ಅವರಿಗೆ || ೧೨ ||

ಸ್ತ್ರೀಯರ್ಗೆ ತಮ್ಮ ಪತಿಯೇ ಸುಹೃತ್ ಸ್ನೇಹ-
ನೀಯೀವದು ಧರ್ಮವು ನೀನೆಂದುದು ಸತ್ಯ
ಪ್ರೀಯರು ನಿನ್ನ ಸಂಪರ್ಕದಿಂದೆಲ್ಲಾರು
ಪ್ರೀಯನು ಸರ್ವರಿಂದೆಂದರಸುತ
ಶ್ರೀಯಂಘ್ರಿಯ ಸ್ನೇಹ ತೊಡಕಿ ಬಂದೆವು
ಪ್ರಿಯೋತ್ತಮ ನಮ್ಮ ಆಶೆ ವೃಥಾ ಮಾಡೋ-
ದೀಯಧರ್ಮವು ನಿನಗೆ ಸಲ್ಲದು ಹೃ-
ದಯತಾಪವಾರಕ ಕೇಳೋ ಶ್ರೀಪರೆ || ೧೩ ||

ನಿಮ್ಮ ಶ್ರೀಪದಾಬ್ಜ ಬಿಟ್ಟೇಳಲೊಲ್ಲವು
ನಮ್ಮ ಕಾಲ್ಗಳು ಮುಂದಕೆ ತವಾಧರ
ದಮೃತವನು ಸೇಚಿಸು ಮಂ-
ದಸ್ಮಿತೇಕ್ಷಣಲಕ್ಷಣನಾಗಿ
ಸನ್ಮಾರ್ಗವೇಣುನಾದವನು ಕೇಳಿಸು
ರಮಣಿಯರರ್ಥ ಪೂರೈಸೋ ಮುಕುಂದ
ನಿಮ್ಮಂಘ್ರಿಪದ್ಮದ ವಿರಹಜಾಗ್ನಿಯ
ಶಮನವನು ಮಾಡು ಶ್ರೀಪತೇ || ೧೪ ||

ನಿನ್ನ ಕೃಪಾಂಬುಧಿಲಿಂದೆಮ್ಮ ಸಂದಿಸು
ಇನ್ನೆಮ್ಮುಪೇಕ್ಷಿಸೆಯಾದರೆ ಪ್ರಾಣವ
ಚಿನ್ಮಯಾಂಘ್ರಿಗೊಪ್ಪಿಪೆವು ನೀನೆ ಸಾಕ್ಷಿ
ಕನ್ನೆಲಕುಮಿ ನಿಮ್ಮ ಹೃನ್ಮಂದಿರ-
ವನ್ನಾಶ್ರಯಿಸಿದ್ದು ತೃಪ್ತಿ ಇಲ್ಲದೆ
ಹೊನ್ನ ಶ್ರೀತುಲಸಿಯಾದಳು ಶ್ರೀಪಾದ-
ವನ್ನು ಬಿಡಳು ನಾವೆಂತು ಬಿಡುವೆವು
ಧನ್ಯವು ವರಜನಪ್ರಭೋ ॥ ೧೫ ॥

ಇಂದೆಮ್ಮ ನೀಕರಿಸುವದು ಧರ್ಮವೇ
ಇಂದಿರೆಯರಸ ಮೂಲೋಕಸುಂದರ
ಎಂದೆಂದು ಸರಿಮಿಗಿಲಿಲ್ಲದಚ್ಯುತ
ಬಂದೇವು ತಪಸಿಯಿಂದೀಗ
ಹೊಂದಿಸು ಕಯ್ಯ ನಮ್ಮುರೋಜಗಳಿಗೆ
ಇಂದೀವರೇಕ್ಷಣ ಪ್ರಸನ್ನವದನ
ಎಂದು ಪ್ರಾರ್ಥಿಸಿದರಬಲೆಯರು ದಯಾ-
ಸಿಂಧು ಮುಕುಂದ ಸಲಹೆಂದರು ॥ ೧೬ ॥

ಅಂದು ಯೋಗೇಶ್ವರೇಶ್ವರ ದಯಾಂಬುಧಿ
ಇಂದುಮುಖೇರ ರಮಿಸಿದ ಸ್ಮರಮಣ
ಮಂದಸ್ಮಿತೇಕ್ಷಣ ರೋಚಿಯಿಂದಚ್ಯುತ
ಇಂದು ಭಾಮೆಯರ ಮಧ್ಯದಲಿ
ಚಂದಾದ ವೈಜಯಂತಿ ಕೊರಳಿಂದ ಗೋಪೇರ
ವೃಂದದಿ ರಾಜೀವ ನೀಲೋತ್ಪಲ ಕುಸುಮ
ಗಂಧಮಾರುತನೆಡೆಗಾನ ಕೇಳಿ
ಕುಂದರದನೆಯರು ನಂದದಿಂದ ॥ ೧೭ ॥

ಕಾಳಿಂದಿಕೂಲ ಭ್ರಾಜಧ್ವಾನಂಗಳಲಿ
ಆ ಲೋಲನೇತ್ರೇರ ಕ್ರೀಡಿಸಿ ಅಲ್ಲಲ್ಲಿ
ಮೆಲ್ಲೆದೆಗಾರ್ತೇರ ತೋಳಲಿ ತೋಳಿಟ್ಟು
ಭಾಳ ನರ್ಮೋಕ್ತಿಯಿಂದಲೊಪ್ಪಿ
ಶ್ರೀಲೋಲ ಹಾಸ್ಯೋಕ್ತಿಯಿಂದ ಕೂಡಿ ಕ-
ರಾಳ ಕ್ರೀಡೆಯಿಂದ ವಾಸವ ಜಗುಳಿಸಿ
ಮೇಲಿಟ್ಟೆಡ ಮೊಲೆಯಲ್ಲಿ ಲೇಖಿಸಿದ
ಸಾಲು ಕರಜಾಗ್ರಗಳಿಂದಲಿ ॥ ೧೮ ॥

ಕಾಮಾಗ್ನಿಯಿಂ ತಪ್ತ ರಾಮೆಯರಿಗೆ ಪೂರ್ಣ
ಕಾಮ ಮನ್ನಿಸಿದರೆ ಮತ್ತರಾದರು
ಪ್ರೇಮಾವಲೋಕನ ಭಾಗ್ಯವುದಿಸಿತು
ಸೋಮಪೂರ್ಣ ಸುಮುಖಿಯರಿಗೆ
ಶ್ರೀಮಾಧವ ತಮ್ಮ ವಶ್ಯನೆಂದರಿತು
ವಾಮದೃಶಿಯರು ತಿಳಿದರಾಕ್ಷಣ
ಈ ಮಹಾಪರಾಧವ ಕಂಡು ದೇವೇಶ
ತಾ ಮತ್ತೆ ಅಪ್ರತ್ಯಕ್ಷನಾದನು ॥ ೧೯ ॥

ಶ್ರೀಭೂದುರ್ಗಾಲೋಲ ಲೀಲಾವಿಶಾಲನು
ತ್ರಿಭುವನೇಶ್ವರ ತ್ರಿಭವನಾಧಿಪ
ಭೂಭೃತ ಸಂಭೃತ ಸಸ್ತುತ ಶ್ರೀಪದ್ಮ-
ನಾಭನಂತಾನಂತ ಭಾನುಭಾಸ್ಕರ
ಭೂಭಾರ ಸಂಹಾರ ಪಾರ ಕೃಪಾಕರ
ಸ್ವಭಾವ ವೈಭವ ಜ್ಞಾನಾನಂದಧರ
ಶ್ರೀಭೃತ್ ಪ್ರಸನ್ನವೆಂಕಟಕೃಷ್ಣ ಸರ್ವೇಷ್ಟ
ಶೋಭಿಸಿದನು ವ್ರಜದಿ ॥ ೨೦ ॥

## ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ
### ( ಕೆಲವು ಆಯ್ದ ಪದ್ಯಗಳು )

ರಾಗ–ನಾಟ (ಭಾಮಿನಿಷಟ್ಪದಿ) ತ್ರಿಪುಟತಾಳ

ಏಕರಾಡ್ ! ವಿಶ್ವೈಕಕಾರಕ
ಏಕವ್ಯಾಪಕ ಏಕಸ್ಥಾಪಕ
ಏಕಭೋಜಕ ಏಕಯೋಜಕ ಏಕತೋಕಾತ್ಮ ||
ಏಕಸೃಜ ಭುವನೈಕವರ್ಧಕ
ಏಕಮಾರಕ ಏಕತಾರಕ
ಏಕಯಾಜಕ ಏಕಸೂಚಕ ಏಕಪತ್ರ ನಮೋ || ೧ ||

ದ್ವಯಕ್ರಿಯೇಶ್ವರ ದ್ವಯಪಥೇಶ್ವರ
ದ್ವಯಸುವಿಸ್ತರ ದ್ವಯವಿಗೋಚರ
ದ್ವಯನಿವಾರಕ ದ್ವಯಪ್ರದಾರಕ ದ್ವಯಸಮಯಪೂರ್ಣ ||
ದ್ವಯಪ್ರವಾಹಕ ದ್ವಯನಿಯಾಮಕ
ದ್ವಯನಿರಂತರ ದ್ವಯದ್ವಯೇತರ
ದ್ವಯಸುಬೋಧಕ ದ್ವಯಪ್ರಸಾದಕ ದ್ವಯಭಯಘ್ನ ನಮೋ || ೨ ||

ತ್ರಿಯುಗ ತ್ರಿವಿಗ್ರಹ ತ್ರಿಪದಕಾಲ
ತ್ರಿಯಗ ತ್ರಿದಿವಪ ತ್ರಿಪಥಗಾಪಿತ ತ್ರಿ-
ನಯ ನಾರಿಹನ್ ತ್ರಿಪುರಮೋಹಕ ತ್ರಯತ್ರಿಂಶತ್ ಸುರಪ ||
ತ್ರಿಯುಗುದಿತ ತ್ರಿಗುಣೇಶಸಾಗರ
ತ್ರಿಯಪ ಪಂಚಕ ತ್ರಿವಿಧಭಾಷ್ಯ ನಿ-
ಚಯಕಚಕ ತ್ರಿದಶಾರ್ಚ ತ್ರಿಜಗದ್ಧರಣಮಾರ್ಗ ನಮೋ || ೩ ||

ಚತುರ್ವಿಧಾತ್ಮಾ ಚತುರ್ಭುಜಾಂಚಿತ
ಚತುರ್ಮುಖಾಧಿಪ ಚತುರ್ವಿಧಾರ್ಥದ
ಚತುರ್ವರ್ಣಾಶ್ರಯ ಚತುರ್ಮುಕ್ತಿ ಚತುಷ್ಟಯೇಶ್ವರ ತಾ ||

ಚತುಃಸಮುದ್ರಗ ಚತುರತರ ಮತಿ-
ಚತುರ್ವಿಧಾಯುತ ಚತುರ್ಬಲಾಂಬುಧಿ
ಚತುರ ವೇದಾರ್ಥಿತಚರಣ ಚತುಶ್ಶಾಸ್ತ್ರ ಪೂಜ್ಯ ನಮೋ ॥ ೪ ॥

ಪಂಚಮುಖ ಮುಖಪಂಚಮುಖನುತ
ಪಂಚಜನ ರಿಪು ಪಂಚಮೋಕ್ಷದ
ಪಂಚಪಾಂಡವ ಪ್ರಾಣವರ ಪಂಚಾಕೃತವ್ರಾತ ॥
ಪಂಚಶರಪಿತ ಪಂಚವ್ಯೂಹ ಸು-
ಪಂಚಭಿದಮತ ಪಂಚಪರ್ವಹ
ಪಂಚಕಾಲಜ್ಞಜ್ಞ ಸಂಭೃತ ಪಂಚಬಾಣ ನಮೋ ॥ ೫ ॥

ಷಟ್ಸಹೋದರ ಷಟರಣಚರ
ಷಟ್ಸಪತ್ನಹನ್ ಷಡೂರ್ಮಿಹರ
ಷಟ್ ಶಕ್ತ್ಯಾತ್ಮಕ ಷಡ್ಗುಣೇತರ ಷಡ್ರುತ ಪ್ರವಹ ॥
ಷಟ್ಕರಾಭಿದ ಷಟ್ಪರೋಕ್ಷದ
ಷಟ್ಕ್ರಯುಗ ಷಟ್ ಶಾಸ್ತ್ರಪ್ರಿಯ
ತಮುಷಟ್ಕ ಸಹಗ ನಮೋ ॥ ೬ ॥

*

ಅಷ್ಟಕಾರಣ ಶ್ಲಿಷ್ಟಮಹಿಷೆಯ-
ರಷ್ಟಕಾಶ್ರಯ ಅಷ್ಟಮದಹರ
ಅಷ್ಟಕಾಷ್ಟಿಗ ಅಷ್ಟಭೂತಿದ ಪೃಷ್ಟ ಸ್ರುತ್ಯಹ ॥
ಅಷ್ಟದಶಕ್ಷೋಣಿ ಪ್ರಜಹರ
ಅಷ್ಟನಾಗಪ ಅಷ್ಟಭುಜಧರ
ಅಷ್ಟಆಯುಧ ಸಂಭೃತಾಷ್ಟಾಪಧ ತ್ರಿಭಾಂಗ ನಮೋ ॥ ೮ ॥

---

* ಏಳನೇ ಪದ್ಯ ದೊರಕಿಲ್ಲ

ನವಸುರತ್ನಾಭರಣಯುಕ್ ತ್ರಿ-
ರ್ನವಕಪ್ರಿಯ ನವದ್ವಾರಪುರ ಪ್ರಭೆ
ನವಶಯುಕ್ತಾತ್ಮಕ ನವಗ್ರಹ ನವದೃಯಾಗದುಣ ||
ನವರಸೇಶ್ವರ ನವಪ್ರಜೇಶಪ
ನವನಿಧೀಶ ನವಾರ್ಥದೆ ದಾ-
ನವರಿಪುವೆ ನವಕೋಟ್ಯಸುರರಿಂ ನಮಿತ ಚರಣ ನಮೋ || ೯ ||

ದಶಶತಾನನ ದಶಶತಾಂಬಕ
ದಶಶತಸುತೋರ್ದಂಡ ದರಖಳ
ದಶದಶಾಭಿದ ದಶಶತಾಭಿದ ಖಗಾಸುರಪ ||
ದಶವರೂಥಜ ದಶಮುಖಘ್ನತ್ರಿ-
ದಶಭಯಾಂತಕ ದಶಕಕುಭಹಸತ್
ದಶನ ದಶಮತಿ ಭಾಷ್ಯಖುತ ದಶಸೀಶದ್ರುಕ್ಷ ನಮೋ || ೧೦ ||

ಮಧ್ವವಲ್ಲಭ ಮಧ್ವತೀರ್ಥಗ
ಮಧ್ವಮತಪರ ಮಧ್ವಪತಿ ಮುನಿ
ಮಧ್ವರಮಣ ಶ್ರೀಮಧ್ವಯತಿನುತ ಮಧ್ವಪುಷ್ಕರಪಾ ||
ಮಧ್ವಪೋಷಕ ಮಧ್ವಭಾಷಕ
ಮಧ್ವತೋಷಕ ಮಧ್ವರಿಪುಹರ
ಮಧ್ವಕಾವದ ಮಧ್ವಹೃದ್ಗುಹ ಮಧ್ವವಿಭವ ನಮೋ || ೧೧ ||

ಪ್ರಸನ್ನಭವನ ಪ್ರಸನ್ನಭಾಷಣ
ಪ್ರಸನ್ನಕಾರ್ಯ ಪ್ರಸನ್ನಗುಣನಿಧೆ
ಪ್ರಸನ್ನನಾಮದ ಪ್ರಸನ್ನತೇಜದ ಪ್ರಸನ್ನತರ ಮೂರ್ತೇ ||
ಪ್ರಸನ್ನಪುರುಷ ಪ್ರಸನ್ನಸೋಂಕಿತ
ಪ್ರಸನ್ನಕಥನ ಪ್ರಸನ್ನಭೂಷಣ
ಪ್ರಸನ್ನಚರಿತ ಶ್ರೀಪ್ರಸನ್ನವೇಂಕಟ ಪ್ರಸನ್ನಕೃಷ್ಣ ನಮೋ
ನಮೋ || ೧೨ ||

## ಮಂಗಲಾಚರಣ

(ಆದಿನಾಥಗೆ ಜಯಮಂಗಳಾ)

ರಾಗ–ಪಾಡಿ (ಮಾಲಕಂಸ) ತಾಳ–ಆದಿ (ತೀನ್ ತಾಲ)

ಆದಿನಾಥಗೆ ಜಯಮಂಗಳಾ ।
ಶ್ರೀಧರ ಮೂರ್ತಿಗೆ ಶುಭಮಂಗಳಾ ॥ ಪ ॥

ಧರಿಸಿ ನಾವೆಯ ಸತ್ಯವ್ರತನ ಪಾವನಮಾಡಿ ।
ಚರಿಸಿದ್ಯೋ ಮಂದರಗಿರಿಯ ಪೊತ್ತು ॥
ಧರೆಯ ನೆಗಹಿ ಬಂಗಾರಗಣ್ಣಿನವನ ।
ಹರಿದು ದೈತ್ಯಜಗೊಲಿದು ಬಂದವಗೆ ॥ ೧ ॥

ಸುರಪನಂತಸ್ತಾಪ ತರಿದು ಧರಿತ್ರಿಯಾ ।
ಸುರರಿಗೆ ಸಕಲ ಪದವಿಯನಿತ್ತು ॥
ಶರಧಿಯ ದಾಟಿ ದಶಶಿರನ ತಲೆ ಸವರಿ ।
ತುರುಗಾಯಿದ ಗೋಪೇರ ಅರಸನಿಗೆ ॥ ೨ ॥

ಅಂತರಾಳ ಪಟ್ಟಣಕಾಪಾಯವನು ಮಾಡಿ ।
ಅಂತಕಯವನರಾದವರಿಗೆ ॥
ಚಿಂತಿಪ ದಾಸರ ಚಿಂತಾಮಣಿಗೆ ಸಿರಿ ।
ಕಾಂತ ಪ್ರಸನ್ವೆಂಕಟದಾತನಿಗೆ ॥ ೩ ॥

## ಲಾಲಿ ಮುಕುಂದ ಲಾಲಿ ಗೋವಿಂದ

ರಾಗ–ಶಂಕರಾಭರಣ (ಭೈರವ) ತಾಳ–ಆದಿ (ತೀನ್ ತಾಲ)

ಲಾಲಿ ಮುಕುಂದ ಲಾಲಿ ಗೋವಿಂದ ।
ಲಾಲೀಮೈಯಾ ಲಾಲೀ ॥
ಲಾಲಿ ಮೂರ್ಕೈದಾಲಿಪ್ಪೆ ।
ಲಾಲಿಯುರ ಪ್ರಭು ಲಾಲಿ ॥ ಪಲ್ಲ ॥

ಜಗ ಜಗುಳಿಸಿ ವಟಪತ್ರದಿ ಮಲಗಿದೆ ।
ಲಾಲಿ ಮೈಯಾ ಲಾಲಿ ।

ಮಗುವಾಗಿವ್ರಜದೊಳು ತೊಟ್ಟಿಲೊಳೊಪ್ಪಿದೆ |
ಲಾಲಿ ಮೈಯಾ ಲಾಲಿ ‖ ೧ ‖

ಸ್ವಗತಭೇದವರ್ಜ್ಯ ಪರಮಾತ್ಮ ಪರಬ್ರಹ್ಮ |
ಲಾಲಿ ಮೈಯಾ ಲಾಲಿ ‖
ಜಗದ ಜೀವರ ಬಿಂಬಾಮೂರ್ತಿ ತನಂತಾನೆ |
ಲಾಲಿ ಮೈಯಾ ಲಾಲಿ ‖ ೨ ‖

ಪಯೋನಿಧಿವಾಸ ಪರೇಶ ಪರಿಪೂರ್ಣ |
ಲಾಲಿ ಮೈಯಾ ಲಾಲಿ ‖
ಶ್ರೀಯರಸ ವೈಕುಂಠವಲ್ಲಭ ಶ್ರೀಕೃಷ್ಣ ‖
ಲಾಲಿ ಮೈಯಾ ಲಾಲಿ ‖ ೩ ‖

ಧರೆಯಪಾವನ ಮಾಡೆ ಪಾಂಡವರಿಗಾಗಿ ಬಂದೆ |
ಲಾಲಿ ಮೈಯಾ ಲಾಲಿ ‖
ಸುರರ ಪುಣ್ಯದ ಬಳ್ಳಿ ಫಲಿಸಲಿಕ್ಕುದಿಗಿದೆ
ಲಾಲಿ ಮೈಯಾ ಲಾಲಿ ‖ ೪ ‖

ಅಜಮಿಳ ಗಜಧ್ರುವ ಅಂಬರೀಷಪಾಲಾ |
ಲಾಲಿ ಮೈಯಾ ಲಾಲಿ
ಸುಜೀವಿ ಪ್ರಹ್ಲಾದನ ಸಲಹೀದಾ ನರಹರಿ |
ಲಾಲಿ ಮೈಯಾ ಲಾಲಿ ‖ ೫ ‖

ಅಸಮ ಬಾಲಕ ಅವ್ಯಾಕೃತಾಂಗನೆ |
ಲಾಲಿ ಮೈಯಾ ಲಾಲಿ ‖
ವಿಷಮವಿದೂರ ಅಗಣಿತ ಸುಗುಣಾರ್ಣವ |
ಲಾಲಿ ಮೈಯಾ ಲಾಲಿ ‖ ೬ ‖

ಸ್ಮೃತಿಗಿರಿಧರ ಶಿಶುಮೃಗ ಜೈಲಾಧರ |
ಲಾಲಿ ಮೈಯಾ ಲಾಲಿ ‖
ಕೃತಕೃಷ್ಣೆ ಧರ್ಮಪಾಲ ಪ್ರಸನ್ವೆಂಕಟೇಶಾ |
ಲಾಲಿ ಮೈಯಾ ಲಾಲಿ ‖ ೭ ‖

* * * *

# ಶಬ್ದಕೋಶ

***

ಅಂಗಜಲುಬ್ಧಕ : ಕಾಮಾಸಕ್ತ, ವಿಷಯ ಲೋಲುಪ

ಅಂಘ್ರಿಪದ್ಮ (ವನಜ): ಪಾದಕಮಲ

ಅಂಬರ : ವಸ್ತ್ರ

ಅಘ : ಪಾಪ

ಅಘಹರ : ಪಾಪನಾಶಕ

ಅಜ : ಬ್ರಹ್ಮ

ಅಧರಸೋಮ : ಅಧರಾಮೃತ

ಅನರ್ಘ್ಯಾಂಬರ : ಬೆಲೆಯುಳ್ಳ ವಸ್ತ್ರ

ಅನಭಿಜ್ಞರು : ಅರಿಯದವರು

ಅನವರತ : ನಿರುತ, ಸದಾ

ಅನಿಮಿಷ : ದೇವತೆಗಳು

ಅಟ್ಟಿಟ್ಟ: ಅಡುಗೆಮಾಡಿ ಇಟ್ಟ, ಬೇಯಿಸಿಟ್ಟ

ಅಪವರ್ಗ : ಮೋಕ್ಷ

ಅಪವರ್ಗ್ಯ : ಮೋಕ್ಷಕ್ಕೆ ಯೋಗ್ಯ

ಅಪ್ಪಂಗೆ : ವರುಣನಿಗೆ

ಅಬ್ಜೋಜ : ಬ್ರಹ್ಮ

ಅಯ್ಯ : ತಂದೆ

ಅರಣಿ : ಹೂವು, ಯಾಗಕ್ಕೆ ಉಪಯೋಗಿಸುವ ಕೊರಡು

ಅರಿಪರಿಹರ : ವೈರಿನಾಶಕ

ಅರುಣಾಂಬರಧರ : ಪೀತಾಂಬರಧರ

ಅವನಿಪ : ರಾಜ

ಅವಜ್ಞಾ : ಉಪೇಕ್ಷೆ, ಮರೆವು

ಅಶನ : ಊಟ, ಆಹಾರ

ಅಸಿಯರು : ಸುಂದರಿಯರು

ಅಹರ್ನಿಶಿ : ಹಗಲು-ರಾತ್ರಿ

ಅಹಸ್ಸು : ಹಗಲು

ಅಹಿ : ಸರ್ಪ

ಅಹಿಪ : ಆದಿಶೇಷ

ಅಳಕ : ಸಡಿಲ

ಅಕ್ಷಿ : ಕಣ್ಣು

ಆಗಾರ : ಮನೆ

ಆಜ್ಯ : ತುಪ್ಪ

ಆತಪತ್ರ : ಕೊಡೆ

ಆತವು : ಧರಿಸಿದವು

ಆರ್ತಸ್ವರ : ಸಂಕಟದ ಸ್ವರ

ಆಧಿ-ವ್ಯಾಧಿ : ರೋಗ-ರುಜಿನ

ಆನಂದಶತಕ : ಆನಂದಪರಿಪೂರ್ಣ

ಆನೀಕ : ಸಮೂಹ

ಆಮುಷ್ಮಿಕ : ಪರಲೋಕಕ್ಕೆ ಸಂಬಂಧಿಸಿದ

ಆವು : ಆಕಳು, ಗೋವು, ಹಸು

ಇಂದುವದನೆಯರು : ಚಂದ್ರಮುಖಿಯರು
ಇಂದುಶೇಖರ : ಶಿವ
ಇಟ್ಟೆಡೆಯು : ಎರಡೂ ಕಡೆಯು
ಇನ : ಸೂರ್ಯ
ಇಸಿತು : ತಾಗಿತು
ಈಂಟು : ಹೀರು
ಈರಡಿ : ಎರಡು ಪಾದಗಳು
ಈಶ್ಯಾಡಿ : ಈಜಾಡಿ
ಉಗ್ಗಡ : ಶ್ರೇಷ್ಠ
ಉಪ್ಪಡಿಸು : ಘೋಷಿಸು
ಉಚ್ಚಿಲೀಂಧ್ರ : ನಾಯಿಕೊಡೆ
ಉನ್ಸಾಹ : ಉತ್ಸಾಹ
ಉಮೆ : ಪಾರ್ವತಿ
ಉಮ್ಮ ; ಮುದ್ದು (ತೊದಲ್ನುಡಿ)
ಉಮ್ಮಯ : ಆನಂದ
ಉರಗೇಶ : ಆದಿಶೇಷ
ಉರೋಜ : ಸ್ತನ
ಊಡು : ಉಣಿಸು
ಊರ್ಧ್ವತಿಲಕ : ಉದ್ದನಾಮ
ಊರ್ಮಿ : ತೆರೆ
ಊಳಿಗ : ಸೇವೆ
ಋತ್ವಿಜ : ಯಜ್ಞ ಮಾಡುವವರು
ಎದೆದಾವರೆ : ಹೃದಯ ಕಮಲ
ಎರವು : ಕಡ, ಸಾಲ
ಎಳೆನೇಸರ : ಬಾಲರವಿ
ಐದಿರಿ : ಹೋಗಿರಿ
ಒಕ್ಕಣಿಕೆ : ಓಲೆ, ಬರವಣಿಗೆ
ಒಳಕೊಂಬು : ಒಳಕೊಳ್ಳು, ಸಮಾವೇಶ
ಔಘ : ಸಮೂಹ
ಕಂಚುಕ : ಕುಪ್ಪಸ
ಕಂಠಕಾಷ್ಠ : ಕೊರಳದೊಣ್ಣೆ, ಗುದ್ದಿ
ಕಂತು : ಮನ್ಮಥ
ಕಕ್ಕುಲಾತಿ : ಪ್ರೀತಿ, ದಯೆ
ಕಂದರ್ಪ : ಕಾಮ
ಕಂದರ್ಪನಯ್ಯ : ಕೃಷ್ಣ
ಕಟವಾಯಿ : ಬಾಯಿಯ ಕೊನೆಯ ಭಾಗ
ಕಡಲಶಯನ : ಸಾಗರಶಯನ, ವಿಷ್ಣು
ಕಣ್ಣೊರತೆ : ಕಣ್ಣೀರು, ಅಶ್ರು
ಕದಪು : ಗಲ್ಲ, ಕೆನ್ನೆ
ಕದಳಿ : ಬಾಳೆ
ಕಪೀಶ : ಹನುಮಂತ
ಕಬ್ಬು ಬಿಲ್ಲಿನವ : ಕಾಮ
ಕಮಲಜ ; ಬ್ರಹ್ಮ
ಕರವಲಯ : ಕೈ ಬಳೆ
ಕರಿಜನ್ಮ : ಆನೆಯ ಜನ್ಮ
ಕರಿವರದ : ಆನೆಗೆ ವರವಿತ್ತವ (ವಿಷ್ಣು)
ಕಲವೇರಿ : ಕಮಲವನ್ನು ಏರಿ
ಕಲ್ಲುವೇ : ಕಲ್ಲೇ (ವಿಶೇಷ ಪ್ರಯೋಗ)

ಕಾಂಚಿದಾಮ : ನಡುಪಟ್ಟಿ
ಕಾಕುಮತಿ : ದುರ್ಬುದ್ಧಿ
ಕಾಮಜನಕ : ಕೃಷ್ಣ
ಕಾಮುಕಭಕ್ತಿ : ಕಾಮವಾಸನೆ-
ಯಿಂದುಟಾದ ಭಕ್ತಿ
ಕಾವನಯ್ಯ : ಕೃಷ್ಣ
ಕಾಳಿಂದೀಕೂಲ : ಯಮುನಾ
ನದಿಯ ದಂಡೆ
ಕಿತವ : ಮೋಸಗಾರ
ಕುಂಭಿಣಿ : ಭೂಮಿ, ನೆಲ
ಕುಚ್ಛಿತ : ಹೀನವಾದ
ಕುಮುದ : ಕಮಲ
ಕೂಲ : ದಂಡೆ
ಕೆಟ್ಟೋಗರ : ಹಳಸಿದ ಅನ್ನ
ಕೆಲದೇರು : ಗೆಳತಿಯರು
ಕೆಳದಿ : ಗೆಳತಿ
ಕೈತವ : ಮೋಸ
ಕೊರಚ್ಚಮ್ಮ : ಕೊರವಮ್ಮ
ಕೋವಿದ : ಪಂಡಿತ
ಖೇದ-ಮೋದ : ದುಃಖ, ಸುಖ
ಗಜರಾಜಗಾಮಿನಿ : ಆನೆಯಂತೆ
ನಡಿಗೆ ಉಳ್ಳವಳು
ಗಡಣ : ಸಮೂಹ
ಗ್ರೀವ : ಗೋಣು, ಕುತ್ತಿಗೆ
ಗೂಢಲಿಂಗ ; ಗೋವರ್ಧನಗಿರಿ
ಗೈರಿ : ಕ್ಯಾಂವಿ, ಕೇವಿ

ಗೋಖುರಾರ್ದಿತ : ಆಕಳಪಾದ
ಸ್ಪರ್ಶಿತ
ಗೋದೋಹನ : ಆಕಳಕರೆಯುವುದು
ಗೋವೇರು : ಗೋಪಿಯರು
ಗೋಷ್ಪದ : ಆಕಳ ಪಾದದಷ್ಟು
ಘನವೊತ್ತು : ಮೋಡ
ಘಸಣಿ : ನೋವು, ವೇದನೆ,
ತಿಕ್ಕಾಟ
ಘಾಸೆ : ಹಿಂಸೆ, ಶ್ರಮ
ಚಕ್ರಿ : ವಿಷ್ಣು, ಕೃಷ್ಣ
ಚರಸುರತರು : ಚಲಿಸುವಂಥ
ಕಲ್ಪವೃಕ್ಷ (ಶ್ರೀಕೃಷ್ಣ)
ಚಷಕ : ಪಾತ್ರೆ
ಚಾವಡಿ : ಮಂಟಪ, ಕಚೇರಿ,
ಸಭಾಮಂದಿರ
ಚಿತ್ತಾಶಿಖಿ : ಮನಸ್ಸೆಂಬ ನವಿಲು
ಚಿನ್ಮಯಾಧರ : ಕೃಷ್ಣ
ಛಂದಸ್ಸು : (ವಿಶೇಷ ಅರ್ಥ) ವೇದ
ಛದ್ಮಿ : ಮೋಸಗಾರ
ಜಗುಳಿಬಿದ್ದ : ಜಾರಿಬಿದ್ದ
ಜಗುಳು : ಸಡಿಲಾಗು, ಜಾರು
ಜಲಂಧರ : ಮೋಡ, ಮುಗಿಲು
ಜವನವರು : ಯಮದೂತರು
ಜೀಮೂತ : ಮೋಡ
ಝಾವ : ಜಾವ, ಮುಂಜಾನೆ
ತಂಡತಂಡ : ಬೇರೆಬೇರೆ ತರದ

ತಕ್ಕೈಸಿ : ಆಲಿಂಗಿಸಿ, ಅಪಚಿ-ಕೊಂಡು
ತತಿ : ಸಮೂಹ
ತನುಸಂಬಂಧಿ : ಶರೀರ ಸಂಬಂಧಿಗಳು, ಬಂಧುಗಳು
ತಪಿಸಿ : ದುಃಖಬಟ್ಟು
ತರಳ : ಕೂಸು, ಬಾಲಕ
ತವ : ನಿನ್ನ
ತ್ರಾಹಿ : ರಕ್ಷಿಸು
ತಿರ್ಯಕ್ : ೧) ಪಶುಪಕ್ಷಿ ಮುಂತಾದ ನಿಮ್ನ ವರ್ಗದ ಪ್ರಾಣಿಗಳು ೨) ಅಡ್ಡತಿಡ್ಡವಾಗಿ ಚಲಿಸುವ
ತ್ರಿದಿ(ದ)ಶರು : ದೇವತೆಗಳು
ತುಂಡ : ಮುಖ
ತುರುಗಾಯಿದ : ಆಕಳ ಕಾಯ್ದ
ತೋಕ : ಮಗು
ತೋಷ : ಆನಂದ, ತೃಪ್ತಿ
ದಂಡುಗ : ತೊಂದರೆ, ಕಷ್ಟ
ದಂಭೋಳಿ : ವಜ್ರಾಯುಧ
ದಧಿಮಥನ : ಮೊಸರು ಕಡೆಯು-ವುದು
ದಾವುದು : ಯಾವುದು
ದಾಹಕ : ನಾಶಮಾಡುವ
ದಿತಿಜಾರಿ : ದೈತ್ಯರ ವೈರಿ, ಕೃಷ್ಣ
ದ್ವಿಜ : ಚಿಕ್ಕೆ
ದ್ವಿಜರಾಜ : ಚಂದ್ರ
ದ್ವಿಜರಾಜವದನೆ : ಚಂದ್ರವದನೆ
ದುಗ್ಧಾಬ್ಧಿ : ಹಾಲಿನ ಸಮುದ್ರ
ದುಗ್ಧಾಬ್ಧಿಜಾತ : ಚಂದ್ರ
ದಿವ್ಯಜನಗುರು : ದೇವರದೇವ
ದುರಿತ : ಕೆಟ್ಟ ಕೆಲಸ, ಪಾಪ
ದುಷ್ಕಾಲಾ : ಕೆಟ್ಟಕಾಲ
ದೇಹಿಕರು : ಬೇಡುವವರು
ಧರ್ಮಾನುಜಾ : ಯಮುನಾ ನದಿ
ಧವ : ಗಂಡ
ಧ್ವಾನ : ಸ್ವರ
ನಂದಜ : ಕೃಷ್ಣ
ನಂದಿಸು : ಆನಂದಿಸು
ನರ್ಮ : ಚೇಷ್ಟೆ
ನವವಿಷಯ : ಹೊಸ ವಿಷಯ
ನಳಿನಭವ : ಬ್ರಹ್ಮ
ನ್ಯಸ್ತ : ನರ್ತಿಸಿದ
ನಾಕಜನರು : ದೇವತೆಗಳು
ನಾಗನೃತ : ನಾಗನೊಡನೆ ಆಡಿದವ-ಕೃಷ್ಣ (ಕಾಲಿಯಾಮರ್ದನ)
ನಾಗಧರಸುತ : ಗಣಪತಿ
ನಾಗದ್ವಿಟ : ಕಾಳಿಂಗನೆಂಬ ನಾಗನ ವೈರಿ
ನಾಗಪತಿ : ಆದಿಶೇಷ
ನಾಗಹರಸಖ : ಕೃಷ್ಣ
ನಾಸ : ಮೂಗು
ನಿರ್ಜರತರು : ಕಲ್ಪವೃಕ್ಷ

ನಿರುಪಾಧಿಕ : ಜಂಜಡವಿಲ್ಲದ
ನಿವೃತ್ತಿ : ಬಿಡುಗಡೆ
ನಿರಯ : ನರಕ, ನರಕಲೋಕ
ನಿಶಿದಿನ : ರಾತ್ರಿ-ಹಗಲು
ನೀಗಿದ· ಕಳೆದ
ನೀರದ : ಮೋಡ
ನೀಲಕಂಧರ : ಶಿವ (ನೀಲಕಂಠ)
ನೀಪ : ಕಡಾಲಮರ
ನೀಲನೀರದ : ನೀಲಮೇಘಶ್ಯಾಮ
ನೀವಿ : ನಿರುಗೆ ಕಟ್ಟು
ನೆಕ್ಕರ : ನಕ್ರ, ಮೊಸಳೆ
ನೋಂತರು : ವ್ರತಮಾಡಿದರು
ಢಗೆ : ದಗೆ, ಉರಿ, ಶಾಖ
ಡೆಂಢೆಣಿಸು : ಬೆದರಿಕೆಯಿಂದ ನಡುಗು
ಪಂಚಶರಪಿತ : ಮದನಪಿತ-ಕೃಷ್ಣ
ಪಪ್ಪಡ : ಹಪ್ಪಳ
ಪದವಾರಿಜ : ಪಾದಕಮಲ
ಪನ್ನಗೇಂದ್ರ : ಆದಿಶೇಷ
ಪಯೋಧರ : ಮೋಡ
ಪರಾಮೃಶ : ಉಪಚಾರ
ಪರಿವೇಷಣ : ಸುತ್ತು
ಪವನಮತ :ಮಧ್ವಮತ
ಪ್ಲವ : ತೇಲು, ಈಜು
ಪ್ರವಣರು : ಭಕ್ತರು
ಪ್ರವಾಳ : ಚಿಗುರು
ಪಾಂಸುಲಭ್ಯ : ಧೂಳಿನಿಂದ ಕೂಡಿದ
ಪಾತಕಿ : ಪಾಪಿ
ಪಾದರಾಜೀವ : ಪಾದಕಮಲ
ಪ್ರಾಕ್ : ಪೂರ್ವ
ಪ್ರಾಂಜಲಿ : ಬೊಗಸೆ
ಪೀಯೂಷಾ : ಅಮೃತ
ಪುಚ್ಛ : ಬಾಲ
ಪುಳಿಂದೆಯರು : ಬೇಡತಿಯರು
ಪೂಗಣೇಶ : ಕಾಮ
ಪೂತ : ಗರಿಗೆದರಿದ
ಪೂಸರಳ : ಕಾಮ, ಪೂಬಿಲ್ಲ
ಪೊಂಗಣ್ಣ : ಹಿರಣ್ಯಾಕ್ಷ
ಫಣಿತಲ್ಪ : ಶೇಷಶಾಯಿ
ಫಣಿಯ ಪೆಡೆಲಿಹ : ಕಾಳಿಂಗನ ಹೆಡೆಯಲ್ಲಿದ್ದ
ಬಗೆ : ರೀತಿ
ಬಣಗುಕಲ್ಲು : ಹಾಳುಕಲ್ಲು
ಬದರ : ಚಂದ್ರ
ಬಧಿರ : ಕಿವುಡ
ಬವಣಿ : ತೊಂದರೆ
ಬವ್ವ : ದೆವ್ವ
ಬರ್ಹ : ನವಿಲು
ಬಾಕುಳಿ : ಹೆಬ್ಬಯಕೆ, ಅತಿಯಾದ ಆಶೆ
ಬಾಣಪಂಚಕ : ಕಾಮ
ಬಾಲಾರ್ಕ : ಬಾಲರವಿ
ಬಾವನ್ನ : ಶ್ರೀಗಂಧ
ಬಾಹನ್ನಕ : ಬರುವಷ್ಟರಲ್ಲಿ

ಬಿನುಗು : ಕ್ಷುದ್ರ, ಕೀಳು
ಬಿಸಜ : ಕಮಲ
ಬಿಸಜಸಖ : ಸೂರ್ಯ
ಬಿಸಜಾಕ್ಷಿ : ಕಮಲಾಕ್ಷಿ, ಕಮಲದಂತೆ ಕಣ್ಣುಳ್ಳವಳು
ಬುಧರು : ಪಂಡಿತರು
ಭವಾಬ್ಧಿ : ಭವಸಾಗರ
ಭೃತ್ಯಗಣ : ಸೇವಕಗಣ
ಭಾಂಡಭರಿತ : ಬ್ರಹ್ಮಾಂಡಭರಿತ
ಭಾರ್ಗವ : ಪರಶುರಾಮ
ಭಾಗದೇವ : ದೈವ
ಭ್ರಾಜತ್ : ಹೊಳೆಯುವ
ಭುಜೋರ್ಮಿ : ಭುಜಗಳೆಂಬ ತೆರೆಗಳು
ಭ್ರೂಭ್ರಮಣ : ಹುಬ್ಬುಹಾರಿಸು
ಭೂರ್ಯನ್ನ : ಭೂರಿ+ಅನ್ನ, ಬಹಳ ಅನ್ನ
ಭೂರಿಸಂಚಿತ : ಚಿನ್ನವನ್ನು ಕೂಡಿ ಹಾಕಿದ, ಶೇಖರಿಸಿದ
ಭೂರುಹ : ಗಿಡ
ಭೇಷಜ : ಮದ್ದು, ಔಷಧ
ಮಂಜುಗಾವಿ : ತಿಳಿಗೆಂಪು ಬಣ್ಣ
ಮದಿರಾಕ್ಷಿಯರು : ಮತ್ತನಯನೆಯರು
ಮಧುಪ : ಭ್ರಮರ
ಮನ್ನಾಣೆ : ಅಪ್ಪಣೆ
ಮಲ(ಲೆ)ತವರು : ಸೊಕ್ಕಿದವರು
ಮಳಲು : ಉಸುಬು
ಮೃಗಾಳಿ : ಮೃಗಸಮೂಹ
ಮೃಷ್ಟೋದನ : ಮಿಷ್ಟ+ಓದನ– ಮೃಷ್ಟಾನ್ನ, ಪಕ್ವಾನ್ನ
ಮಾನಿಸಾ : ಮನುಷ್ಯ
ಮಾಸಹ : ಲಕ್ಷ್ಮೀಸಹಿತ
ಮಾರಸಾಯಕ : ಕಾಮಬಾಣ
ಮುಖಬಾಲಾರ್ಕ : ಬಾಲಸೂರ್ಯನಂತೆ ಮುಖವುಳ್ಳ
ಮುಗ್ಧಾಂಗಿ : ಮೋಹವನ್ನುಂಟು ಮಾಡುವ ಶರೀರ ಉಳ್ಳವಳು
ಮುಗುಳಗಣೆಯ : ಕಾಮ
ಮುನಿವೆಂಗಳು : ಮುನಿಸತಿಯರು
ಮುಳ್ವೊರಿ : (ವಿಶೇಷ ಸಂದರ್ಭದಲ್ಲಿ) ಸಂಕಟಗಳ ಸಮೂಹ
ಮೆಲ್ಲೆದೆಗಾರ್ತಿ : ಮೃದುವಾದ ಎದೆಯುಳ್ಳವಳು
ಮೇಗೆ : ಮೇಲೆ
ಮೇಘಾಳಿ : ಮೋಡಗಳ ಸಮೂಹ
ಮೇದಿನಿ : ಭೂಮಿ
ಮೊಗುವ : ನೀರುಹಾಕಿಕೊಳ್ಳುವ
ಮೌಳಿ : ಕಿರೀಟ
ಯಶಸು : ಯಶಸ್ಸು, ಕೀರ್ತಿ
ಯಾವಸ : ಹುಲ್ಲುಕಡ್ಡಿ
ರಂಹಸ : ರಭಸ, ವೇಗ
ರಥಾಚರಣಧರ : ಕೃಷ್ಣ
ರವ : ಸಪ್ಪಳ
ರಾಕೇಂದು : ಹುಣ್ಣಿಮೆ ಚಂದ್ರ
ರಾಮೆ : ಲಕ್ಷ್ಮಿ

ರಾಮೆಯರು : ರಮಣಿಯರು
ರುಧಿರ : ರಕ್ತ
ರೋಚಿ : ಕಾಂತಿ
ಲವ : ಕಣ, ತೀರಸಣ್ಣ ಭಾಗ (ಸಮಯ ಅಥವಾ ಪದಾರ್ಥದ ಸಣ್ಣ ಅಳತೆ)
ಲಾಂಗೂಲ : ಬಾಲ
ಲುಬ್ಧ : ಅತ್ಯಾಸಕ್ತ, ಲೋಭಿ
ಲೋಗರು : ಜನಸಾಮಾನ್ಯರು, ಜನರು
ಲೋಲ : ಚಂಚಲ, ಆಸಕ್ತ
ವಂಶ : ಕೊಳಲು
ವಟಪತ್ರ : ಆಲದೆಲೆ
ವಡವಾನಳ : ಕಾಡ್ಗಿಚ್ಚು
ವಪು : ಶರೀರ
ವರಜನಪ್ರಭು : ಸಜ್ಜನರ ಒಡೆಯ
ವಲ್ಕಲ : ನಾರಿನ ಬಟ್ಟೆ
ವಸನ : ವಸತಿ, ಆಶ್ರಮ, ಮನೆ
ವೃಂದಾರಕ : ದೇವತೆಗಳು
ವಾಟ : ಹಾದಿ
ವಾತಜಾತ : ವಾಯುಸುತ
ವಾತಿನ : ಮಾತಿನ
ವಾಮದೃಶೆಯರು : ಪ್ರೇಮದೃಷ್ಟಿಯಿಂದ ಕೂಡಿದವರು
ವಾರಿ : ನೀರು
ವ್ಯಾಳರಾಕ್ಷ : ಗರುಡ (ವ್ಯಾಳಾರಿ) ದಂತೆ ಸೂಕ್ಷ್ಮವಾದ ಕಣ್ಣುಳ್ಳ
ವಿಕ್ರಮತ್ರಯ : ಮೂರು ಪದನ್ಯಾಸಗಳು
ವಿಖನಸ : ಬ್ರಹ್ಮ
ವಿಟಪ : ವೃಕ್ಷ, ಗಿಡ
ವಿಪ : ಗರುಡ
ವಿಪಿನ : ಅರಣ್ಯ
ವಿಭಾಡಿಸು : ಗೆಲ್ಲು
ವಿರಂಚಿ : ಬ್ರಹ್ಮ
ವಿವಸ್ತ್ರೆಯರು : ವಸ್ತ್ರವಿಲ್ಲದವರು
ವಿಶಿಖ : ಶರ, ಬಾಣ
ವೈದ್ಯುತಾಗ್ನಿ : ಮಿಂಚು, ಸಿಡಿಲು
ಶಶಿವದನೆ : ಇಂದುವದನೆ, ಚಂದ್ರಮುಖಿ
ಶ್ಯಾಮ : ನೀಲವರ್ಣ
ಶ್ರುತಿತತಿ : ಶ್ರುತಿಸಮೂಹ
ಶೂಲಿ : ಶಿವ
ಶೃಗಾಲ : ನರಿ
ಶೇಷತಲ್ಪ : ಶೇಷಶಾಯಿ, ವಿಷ್ಣು
ಶ್ರೋತ್ರ : ಕಿವಿ
ಶೌಂಡ : ಶ್ರೇಷ್ಠ
ಶೌರಿ : ಕೃಷ್ಣ
ಸಂತಾರೆ : ಸಂತರೇ
ಸಂದುಗಡಿ : ಕೀಲು, ಮರಡು
ಸಂದೋಹ : ಗುಂಪು
ಸಂಸೃತಿ : ಸಂಸಾರ
ಸತ್ಯೇಶ : ಬ್ರಹ್ಮ
ಸ್ತವಿಸು : ಸ್ತೋತ್ರಮಾಡು

ಸದ್ಮ : ಮನೆ, ಆವಾಸ
ಸನ್ನಗದ್ಗದ : ಬಹಳ ಗದ್ಗದ
ಸನ್ನಿಕರ್ಷಣ : ಸಾಮೀಪ್ಯ
ಸರೀಸೃಪ : ಉರಗ, ಹಾವು
ಸ್ಮರಾಸ್ತ್ರ : ಕಾಮನ ಬಾಣ
ಸ್ವಧಾಮ : ಸ್ವಂತಮನೆ
ಸ್ವರಮಣ : ಕೃಷ್ಣ
ಸಾಂದ್ರ : ದಟ್ಟ, ನಿಬಿಡ
ಸಾಯಕ : ಬಾಣ
ಸಾರಂಗಾಕ್ಷೇರು : ಹರಿಣಾಕ್ಷಿಯರು
ಸಾಸಿರನಯನ : ಇಂದ್ರ
ಸ್ವಾದ್ವನ್ನ : ಪಕ್ವಾನ್ನ
ಸಿರಿವರ : ಶ್ರೀವಿಷ್ಣು
ಸ್ನಿಗ್ಧ : ಸ್ನೇಹಯುಕ್ತ
ಸೀಮಂತಿನಿಯರು : ಸ್ತ್ರೀಯರು
ಸುಕಲಾನಿಧಿ : ಚಂದ್ರ
ಸುನೂಪುರ : ಕಾಲಿನ ಆಭರಣ
ಸುಮಾರ್ಗಣ : ಬಾಣ
ಸುರಪತಿ : ಇಂದ್ರ
ಸುರಭಿ : ಕಾಮಧೇನು
ಸುರಋಷಿ : ನಾರದ
ಸೋಮಕುಲಪ : ಚಂದ್ರವಂಶದಲ್ಲಿ ಪ್ರಮುಖ
ಹಸಗೆಡು : (ಹಸಿಕೆಡು) ಹಾಳಾಗು, ಅಸ್ತವ್ಯಸ್ತವಾಗು
ಹವ್ಯಾನ್ನ : ನೈವೇದ್ಯದ ಅನ್ನ
ಹೃತ್ತಾಪ : ಹೃದಯದ ತಾಪ
ಹೃಷ್ಟಮನ : ಸುಪ್ರಸನ್ನ ಮನಸ್ಸು
ಹೊಂದಾಳಿ : ಹೊನ್ನಿನ ತಾಳಿ
ಹೊಲಬು : ರೀತಿ
ಹೈಮಂತ : ಹೇಮಂತಋತುವಿನ
ಕ್ಷುಧೆ : ಹಸಿವು

# ಟಿಪ್ಪಣಿ

ಅಂಥಕಾತ್ಮಜ : ಅಂಥಳಾದ ಅಂಜನೆಯ ಕುವರ –ಹನುಮಂತ.

ಅಂಬರೀಷ : ಸೂರ್ಯವಂಶದ ವೈವಸ್ವತಮನುವಿನ ಮಗನಾದ ನಾಭಾಗನ ಪುತ್ರನು. ಇವನು ವಿಷ್ಣು ಭಕ್ತಾಗ್ರೇಸರ. ಏಕಾದಶಿ ವ್ರತಪರಾಯಣ. ಒಮ್ಮೆ ದುರ್ವಾಸಋಷಿಗಳು ಇವನ ವ್ರತ ಕೆಡಿಸಬೇಕೆಂದು ಬಂದು ವಿಷ್ಣುವಿನ ಚಕ್ರಾಯುಧಕ್ಕೆ ಸಿಲುಕಿ ತೊಂದರೆ ಪಟ್ಟು ಅಂಬರೀಷನಿಗೆ ಮೊರೆಹೊಕ್ಕು ಚಕ್ರಾಘಾತದಿಂದ ಉಳಿದುಕೊಂಡರು.

ಅಂಬುಜಸಮಾಸ್ಯ : ಕಮಲಕ್ಕೆ ಸಮಾನವಾದ ಮುಖವುಳ್ಳ.

ಅಜಮಿಳ : ಕಾನ್ಯಕುಬ್ಜದ ಒಬ್ಬ ಬ್ರಾಹ್ಮಣ. ತಂದೆ, ತಾಯಿ, ಹೆಂಡತಿ ಇವರನ್ನೆಲ್ಲಾ ಬಿಟ್ಟು ಸೂಳೆಯ ಮನೆಯಲ್ಲಿ ದುರಾಚಾರದ ಜೀವನ ಸಾಗಿಸಿದ್ದ. ಇವನ ಹತ್ತು ಮಕ್ಕಳಲ್ಲಿ ಕೊನೆಯವನ ಹೆಸರು. ನಾರಾಯಣ. ಅಂತ್ಯಸಮಯದಲ್ಲಿ ಅಜಮಿಳನು ತನ್ನ ಮಗನನ್ನು ಕರೆದ. 'ನಾರಾಯಣ' ಎಂಬ ನಾಮಸ್ಮರಣೆಯನ್ನು ಅಂತ್ಯದಲ್ಲಿ ಆತ ಪಠಿಸಿದ್ದರಿಂದ ಹರಿಯು ಈತನಿಗೆ ಮೋಕ್ಷಪದವಿಯನ್ನಿತ್ತ.

ಅದಿತಿ : ದಕ್ಷಪ್ರಜಾಪತಿಯ ಮಗಳು, ಕಶ್ಯಪಮುನಿಯ ಪತ್ನಿ. ಈಕೆಗೆ 'ಖ' ಎಂಬ ಹೆಸರಿದೆ. ಇಂದ್ರ ಮೊದಲಾದ ದೇವತೆಗಳೂ ದ್ವಾದಶ ಆದಿತ್ಯರೂ ಈಕೆಯ ಮಕ್ಕಳು.

ಅರಿಆರು : ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಷಡ್‌ವೈರಿಗಳು.

ಅಹಲ್ಯೋದ್ಧರ : ಶಾಪದಿಂದ ಶಿಲೆಯಾಗಿ ಬಿದ್ದ ಅಹಲ್ಯೆಯನ್ನು ರಾಮಾವತಾರದಲ್ಲಿ ಉದ್ಧರಿಸಿದ್ದು.

ಅಹೋಬಲದ ನರಸಿಂಗಯ್ಯ: ಮದ್ರಾಸ್ ರಾಜ್ಯದ ಅಹೋಬಲ ಕ್ಷೇತ್ರದ ಸ್ವಾಮಿಯಾದ ಶ್ರೀನರಸಿಂಹದೇವರು.

ಆನಂದತೀರ್ಥ : ಮಧ್ವಾಚಾರ್ಯರು.

ಕಂಚೀವರದ ರಾಜಯ್ಯಾ : ವಿಷ್ಣುಕಂಚಿ ಕ್ಷೇತ್ರದ ಶ್ರೀಕೃಷ್ಣ.

ಕಂಧರದಶಕ : ರಾವಣ

ಕಡೆಮೊದಲಿನೊಡೆಯ : ಪರಮಾತ್ಮ (ಜೀವದ ಆರಂಭ ಮತ್ತು ಅಂತ್ಯಕ್ಕೆ ಒಡೆಯ)

ಕಮಲಾಯತಲೋಚನ : ಕಮಲದಂತೆ ವಿಶಾಲವಾದ ಕಣ್ಣುಳ್ಳವ

ಕರ್ಮತ್ರಯ : ನಿತ್ಯಕರ್ಮ, ನೈಮಿತ್ತಿಕ, ಕಾಮ್ಯಕ

ಕೃತಪುರದ ವೀರನಾರಾಯಣ : ಗದುಗಿನ ವೀರನಾರಾಯಣ

ಕರಣತ್ರಯ : ಇಂದ್ರಿಯತ್ರಯ

ಕಾಮ್ಯಕರ್ಮ : ಫಲಾಪೇಕ್ಷೆಯಿಂದ ಮಾಡುವ ಕರ್ಮಗಳು

ಕೊಲ್ಲಾಪುರದ ಕನ್ಯೆ : ಕೊಲ್ಲಾಪುರದ ಲಕ್ಷ್ಮೀದೇವಿ

ಕೊಲ್ಲಾಪುರದನಾಥೆ : ಕೊಲ್ಲಾಪುರದ ಒಡತಿ—ಲಕ್ಷ್ಮೀದೇವಿ

ಚತುರ್ಮುಖ : ಬ್ರಹ್ಮ

ಚತುರ್ಮುಖನಯ್ಯ : ವಿಷ್ಣು

ನಾಗರಿಪುಗಮ : ಗರುಡನನ್ನೇರಿ ಸಂಚರಿಸುವವ (ವಿಷ್ಣು)

ನಾಗಾರಿ ಮಧ್ಯೆಯರು : ಗಜಗಳಿಗೆ ವೈರಿಯಾದ ಸಿಂಹದಂತೆ ನಡು ಉಳ್ಳವರು

ನಂದಯಶೋದೆಯ ಸೂನು : ಕೃಷ್ಣ

ಪಂಚಬಾಣ : ಕಾಮ

ಪಂಚಬಾಣನಯ್ಯ : ಕೃಷ್ಣ

ಪಂಚಸಂಸ್ಕಾರಗಳು : ತಪ್ತಮುದ್ರಾಂಕ, ಊರ್ಧ್ವಪುಂಡ್ರಧಾರಣೆ, ಕೃಷ್ಣ ನಾಮ, ಅಷ್ಟಾಕ್ಷರೀ ಮಂತ್ರಧ್ಯಾನ, ಭಗವತ್ ಪೂಜೆ

ಪೃಥುಚಕ್ರವರ್ತಿ : ವೇನರಾಜನ ಮಗ. ಯಾದವರಲ್ಲೊಬ್ಬ. ಈತನ ಪತ್ನಿ ಅರ್ಚಿ. ಈಕೆಯಲ್ಲಿ ಅಂತರ್ಧಾನನೆಂಬ ಮಗನಾದ. ಈತನ ಮರಿಮಗನೇ ಪ್ರಾಚೀನ ಬರ್ಹಿ.

ಪ್ರಾವೃತರು : ಸಂಸಾರದಿಂದ ಮುತ್ತಲ್ಪಟ್ಟವರು.

ಪುಂಡಲೀಕವರದ ಪಂಢರಿಯ : ಮಹಾರಾಷ್ಟ್ರದ ಪಂಢರಪುರ ಕ್ಷೇತ್ರದ ವಿಠ್ಠಲದೇವರು.

ಪುರೂರವ : ಚಂದ್ರಪುತ್ರನಾದ ಬುಧನಿಂದ ಇಲೆಯಲ್ಲಿ ಜನಿಸಿದವ. ಈತ ದೇವವಿಲಾಸಿನಿಯಾದ ಊರ್ವಶಿಯಲ್ಲಿ ಆಯು, ಧೀಮಂತ, ಅಮಾವಸು, ದೃಢಾಯು, ವನಾಯು, ಶತಾಯು ಎಂಬ ಪುತ್ರರನ್ನು ಪಡೆದ.

ಪೂರ್ಣಪ್ರಜ್ಞ : ಆಚಾರ್ಯ ಮಧ್ವರು

ಪೌಂಡ್ರಕ : ಪುಂಡ್ರವಂಶದ ವಾಸುದೇವನ ಪುತ್ರ. ಈತನು ಶ್ರೀಕೃಷ್ಣನಂತೆ ಶಂಖ, ಚಕ್ರಗಳನ್ನು ಧರಿಸುತ್ತಿದ್ದ. ಈತನ ವಧೆ ಕೃಷ್ಣನಿಂದ ಆಯಿತು.

ಭಗದತ್ತ : ಭೂಮಿದೇವಿಯ ಮೊಮ್ಮಗ, ನರಕಾಸುರನ ಮಗ ಈತನ ರಾಜಧಾನಿ ಪ್ರಾಗ್ಜ್ಯೋತಿಷಪುರ. ಕೃತಪ್ರಜ್ಞ ಮತ್ತು ವಜ್ರದತ್ತ ರೆಂಬರು ಭಗತ್ತನ ಮಕ್ಕಳು. ಸುಪ್ರತೀಕವೆಂಬ ಮಹಾಗಜವು ಇವನ ವಾಹನವಾಗಿತ್ತು. ಭಾರತ ಯುದ್ಧದ ಹನ್ನೆರಡನೆಯ ದಿನ ಭಗದತ್ತನು ಸುಪ್ರತೀಕವನ್ನೇರಿ ಪಾಂಡವರ ಸೇನೆಯನ್ನು ಧ್ವಂಸ-ಮಾಡತೊಡಗಲು, ಭೀಮಾದಿಗಳು ಈತನೊಡನೆ ಸೆಣಸದಾದರು. ಕೊನೆಗೆ ಕೃಷ್ಣಕಾರಸ್ಥಾನದಿಂದ ಅರ್ಜುನನ ಅರ್ಧಚಂದ್ರಾಕೃತಿಯ ಬಾಣದಿಂದ ಹತನಾದ.

ಬದರಿಯ ನರನಾರಾಯಣಯ್ಯಾ : ಉತ್ತರ ಪ್ರದೇಶದ ಬದರೀಕ್ಷೇತ್ರದ ನಾರಾಯಣಸ್ವಾಮಿ.

ಬಲಿಮದ ಹೃತ : ಬಲಿಚಕ್ರವರ್ತಿಯ ಗರ್ವಹರಣಮಾಡಿದ

ಬೃಹದ್ಭಾನು : ಈತನೂ ಒಬ್ಬ ದೇವತೆ. ದಿವನ ಮಗ

ಭೂಮಿಜಾರಮಣ : ಶ್ರೀರಾಮಚಂದ್ರ

ಮದನನಯ್ಯ : ಕಾಮನ ತಂದೆ — ಕೃಷ್ಣ

ಮೇಲಾಪುರದ ಚೆನ್ನ : ಬೇಲೂರ ಚೆನ್ನಕೇಶವ

ಯದುಗಿರಿನಾಥ : ಯದುಗಿರಿಯೆಂಬ ಶ್ರೀವೈಷ್ಣವಕ್ಷೇತ್ರ (ಕರ್ನಾಟಕ)

ರತಿಪತಿಪಿತ : ಕೃಷ್ಣ

ರಾಕಾಚಂದ್ರ : ಹುಣ್ಣಿಮೆಚಂದ್ರ

ವಡ್ಡಿ ಜಗನ್ನಾಥ : ಪುರೀಜಗನ್ನಾಥ (ಓರಿಸಾರಾಜ್ಯ)

ವ್ಯಾಸಸೂನು : ಶುಕಮುನಿ

ವೇದಸ್ತೇಯಾರಿ : ಸೋಮಕನೆಂಬ ರಾಕ್ಷಸನು ವೇದಗಳನ್ನು ಅಪಹರಿಸಲು ವಿಷ್ಣುವು ಮತ್ಸ್ಯಾವತಾರಹೊಂದಿ ಆ ರಕ್ಕಸನನ್ನು ಕೊಂದು ವೇದಗಳನ್ನು ಉದ್ಧರಿಸಿದನು.

ಸತ್ರಾಜಿತ : ಯದುವಂಶದ ನಿಮ್ನನ ಮಗ. ಸತ್ವತನವಂಶದ ನಿಘನ ಮಗ. ಇವನಿಗೆ ಪ್ರಸೇತಜಿತು, ಸತ್ರಾಜಿತು ಎಂಬಿಬ್ಬರು ಮಕ್ಕಳು. ಸೂರ್ಯ

ನನ್ನು ಕುರಿತು ಸತ್ರಾಜಿತನು ತಪಸ್ಸುಮಾಡಿ ಸ್ಯಮಂತಕ ರತ್ನವನ್ನು ಪಡೆದನು.

ಸರಸಿಜಭವ : ಬ್ರಹ್ಮ

ಸಾಮಜಾರಾತಿಹರ : ಗಜೇಂದ್ರನಿಗೆ ಮೋಕ್ಷದಾಯಕನಾದ ಕೃಷ್ಣ

ಸಾಯುಜ್ಯ : ಮೋಕ್ಷ (ಚತುರ್ವಿಧ ಮೋಕ್ಷದಲ್ಲಿ ಒಂದು ಪ್ರಕಾರ)

ಸಿರಿಮುಷ್ಟಿನಾಥ. ಕುಂಭಕೋಣಂದ ಹತ್ತಿರ ಇರುವ ಶ್ರೀಮುಷ್ಣಕ್ಷೇತ್ರದ ಸ್ವಾಮಿ.

ಸಿರಿರಂಗದ ರಂಗರಾಯಯ್ಯಾ : ತಿರುಚಿನಾಪಲ್ಲಿಗೆ ಮೂರು ಮೈಲು ದೂರದಲ್ಲಿ ಶ್ರೀರಂಗ ಕ್ಷೇತ್ರವಿದೆ. ಇಲ್ಲಿ ಶ್ರೀರಂಗನಾಥಸ್ವಾಮಿಯ ಬೃಹತ್ ದೇವಾಲಯವಿದೆ.

ಸುರಮುನಿ : ನಾರದ

ಸೋಮಕಖಳ : ವೇದಗಳನ್ನು ಕದ್ದೊಯ್ದ ರಾಕ್ಷಸನಿವ. ವಿಷ್ಣುವು ಮತ್ಸ್ಯಾವತಾರದಲ್ಲಿ ಈತನನ್ನು ಕೊಂದು ವೇದಗಳನ್ನು ಉದ್ಧರಿಸಿದ.

ಹಂಸವಾಹನ : ಬ್ರಹ್ಮ

ಹಂಸವಾಹನಪಿತ : ವಿಷ್ಣು

ಹವಿರ್ಧಾನಿ : ಯಜ್ಞವನ್ನು ಪೂರೈಸುವವಳು. (ಯಜ್ಞಕ್ಕೆ ಬೇಕಾಗುವ ಬಹು ಸಾಮಗ್ರಿಗಳು ಈಕೆಯಿಂದಲೇ ಹುಟ್ಟುತ್ತವೆ).



